ಮನೋಹರ ಗ್ರಂಥಮಾಲೆಯ ಬಿಡಿಮುತ್ತು

# ಬಾಳ ದೇಗುಲದಲ್ಲಿ

( ಕವನಮಾಲೆಯೊಂದು )

ವಿನಾಯಕ

೧೯೫೩

ಮನೋಹರ ಗ್ರಂಥಪ್ರಕಾಶನ ಸಮಿತಿ, ಧಾರವಾಡ

# ಪೀಠಿಕೆ

೧

ಈ ಕವನಮಂದಿರದ ಅಸ್ತಿವಾರವನ್ನು ನಾನು ೧೯೪೩ರ ಅಕ್ಟೋಬರಿನಲ್ಲಿ ಹಾಕಿದೆನು. ಒಂದು ತಿಂಗಳಿನಲ್ಲಿಯೇ ಇದರ ಮುಖ್ಯ ಭಾಗದ ನಿರ್ಮಾಣ ವಾಯಿತು. ಸಹಜವಾಗಿ ಹಿಂದಿನ ಕೆಲವು ಕೃತಿಗಳು ಇದರ ಅಂಗವಾದವು. ಇದು ಪ್ರಕಟವಾಗಲು – ಈಗ ಇಷ್ಟು ವರ್ಷಗಳು ಹಿಡಿದದ್ದರಿಂದ – ೧೯೪೩ರ ನಂತರ ಬರೆದ ಐದು ಕೃತಿಗಳು ಇದರ ಭಾಗವಾಗಿಯೇ ರಚಿತವಾಗಿದ್ದು ಇದರಲ್ಲಿ ಸೇರ್ಪಡೆಯಾಗಿ ನಿಂತಿವೆ.

ಇದು ಬರಿ ಕವನಸಂಗ್ರಹವಲ್ಲ; ಕವನಮಾಲೆ. ಮೊತ್ತಮೊದಲು 'ಸತ್ಯಾಗ್ರಹಿ'ಎಂಬ ಕವನವನ್ನು— ಆಗ ವಿಲಿಂಗ್ಡನ್ ಕಾಲೇಜಿನಲ್ಲಿ ಒದಗಿದ ಒಂದು ವಿಶೇಷ ಸನ್ನಿವೇಶದಿಂದ ಉದ್ರೇಕಗೊಂಡು – ನಾನು ಬರೆದೆ. ಆದರೆ ಆ ಸ್ಫುರಣ ಅಲ್ಲಿಗೇ ನಿಲ್ಲಲಿಲ್ಲ. ಅಂತರಂಗದಲ್ಲಿಯೇ ಧೇನಿಸಿದಾಗ,— ಇದೊಂದು ಬರಿ ಕವನವಲ್ಲ, ಕವನಗಳ ಸರಪಣಿಯೇ ಇದಕ್ಕೆ ತಳಕುಗೊಂಡಿದೆ ಎಂದು ನನಗೆನಿಸಿತು. ಅದು ನನಗೊಂದು ಅಗ್ನಿದಿವ್ಯದ ಕಾಲ; ಅದರಾಚೆಗಿನ ಒಂದು ಶಾಂತಿಯನ್ನು ಪಡೆಯಲು ನನ್ನ ಮನಸ್ಸು ಹವಣಿಸುತ್ತಿತ್ತು. ಈ ಶೋಧದಲ್ಲಿ ಮನಸ್ಸನ್ನು ಹರಿಬಿಡಲು ಆಗ ದೀಪಾವಳಿಯ ರಜೆಯೂ ಇತ್ತು. ಅಂತೇ ಅದನ್ನು ಹರಿಬಿಟ್ಟೆ. ಆಗ **ಕವಿ-ಅನುಭಾವಿ, ಕನಸಿಗ, ಧಾರ್ಮಿಕ-ಕಲೋಪಾಸಕ, ಕಾವ್ಯಗುರು, ಕರ್ಮಯೋಗಿ,**— ಇವೆಲ್ಲ ಒಂದೊಂದೆ-ಯಾಗಿ ಬಂದವು. ಹೀಗೆಯೇ **ಮಗುವಿ**ನಿಂದ **ಮುಕ್ತಜೀವಿ**ಯ ವರೆಗೆ ಒಂದು ಕವನಮಾಲೆಯು ತನಗೆ ತಾನೆ ನಿರ್ಮಾಣವಾಯಿತು. ಅದು ನಿರ್ಮಾಣ ವಾದಂತೆ ಅದರ ರೂಪ-ರೇಷೆಗಳು ನನಗೆ ಸ್ಪಷ್ಟವಾಗಿ ಕಾಣಿಸಿಕೊಂಡವು. ಆಗ, ಹಿಂದೆ ಬರೆದಿದ್ದ **ನಿರಾಶ್ರಿತರು,** ಮದುವಣಿಗ, **ವಿವಾಹಿತ, ಪತಿ, ಅನ್ಯಾನುರಕ್ತ ಪತಿ, ತಾಯಿ, ತ್ಯಾಗಿ, ಕನ್ನಡಿಗ, ಹಿಂದೂ ಭಾರತೀಯ, ಸಮತಾವಾದಿ, ಕ್ರಾಂತಿಕಾರ, ಸಾಹಿತ್ಯಾಚಾರ್ಯ,**— ಇವೆಲ್ಲ ಈ

ಮಾಲೆಯಲ್ಲಿ ತಮ್ಮ ತಮ್ಮ ಸ್ಥಾನಗಳನ್ನು ಹಿಡಿದವು. ಮುಂದೆ ಇದರಲ್ಲಿ ಸಮಾವೇಶವಾದ ಕೃತಿಗಳೆಂದರೆ,— **ಅಸುರ, ದುಃಖಿ, ಭಕ್ತ, ಕನಸಿಗ, ನಿರ್ಲಿಪ್ತ,**— ಎಂಬವು.

ಈ ಕವನಮಾಲೆಯ ಸ್ಪಷ್ಟ ರೇಖೆಗಳು ಹೊಳೆದಿದ್ದು **ಬಾಳ ದೇಗುಲ**ದಲ್ಲಿ ಎಂಬ ಕವನವನ್ನು ಬರೆದಾಗ. **ಸತ್ಯಾಗ್ರಹಿ, ಕವಿ-ಅನುಭಾವಿ, ಕನಸಿಗ,**— ಇವೇ ಮೊದಲಾದ ಕವನಗಳನ್ನು ಬರೆಯುತ್ತಿದ್ದಾಗ ಆಕಸ್ಮಿಕವಾಗಿ -- ಕನಸುಮನಸಿನಲ್ಲಿಲ್ಲದೆ— ಈ ಕವನವು ಹೊರಹೊಮ್ಮಿತು. ಅದನ್ನು ಬರೆದದ್ದು ನನಗೊಂದು ಹೆಚ್ಚಿನ ಅನುಭವ. ಅದನ್ನು ಬರೆವಾಗ ನನ್ನ ಹೃದಯ ಅಗ್ನಿಪುರುಷನಿಗಾಗಿ ಹೊತ್ತಿಸಿದ ಜ್ವಾಲೆಯಾಗಿತ್ತು.

ಮಗುವಿನಿಂದ ಮುಕ್ತಜೀವಿಯ ವರೆಗೆ ಬರೆದು ಲೇಖನಿಯನ್ನು ಕೆಳಗಿಟ್ಟಾಗ ಒಂದು ವಿಚಾರವು ನನ್ನನ್ನು ಬಾಧಿಸಿತು. "ನನಗೆ ಗೊತ್ತಿದ್ದ ಬಾಳದೃಷ್ಟಿಗಳನ್ನೆಲ್ಲ ಇಲ್ಲಿ ಅರಹಿಸಿದೆ; ನಾನು ಆದರಿಸಿದ್ದ ಈಶ್ವರನ ಬಗ್ಗೆ ಬರೆದೆ; ಆದರೆ ಈಶ್ವರನನ್ನಾಗಲಿ, ಮುಕ್ತಜೀವಿಯನ್ನಾಗಲಿ ನಾನು ಕಾಣಲಿಲ್ಲವಲ್ಲ!" ಎಂಬುದೇ ಆ ವಿಚಾರ. ಈ ವೇಳೆಗೆ ಸರಿಯಾಗಿ ಸಾಂಗಲಿಗೆ ಒಬ್ಬ ಮಹಾತ್ಮರ ಆಗಮನವಾಗಿತ್ತು. ಅವರ ದರ್ಶನ ದೊರೆತು, ಅವರ ಕೃಪಾದೃಷ್ಟಿ ಲಭಿಸಿ ನನ್ನ ಅತೃಪ್ತಿ ಹಿಂಗಿತು. ಆ ಪೂಜ್ಯರಿಗೇ ಈ ಕೃತಿಯನ್ನು ನಾನು ಭಕ್ತಿ-ಆದರಗಳಿಂದ ಸಮರ್ಪಿಸಿದ್ದೇನೆ.

ಈ ಕವನಮಾಲೆಯಲ್ಲಿ ಸೇರ್ಪಡೆಯಾದ ಹಿಂದಿನ ಹಾಗು ಮುಂದಿನ ಕವನಗಳನ್ನು ಕುರಿತು ಒಂದು ಮಾತನ್ನು ಹೇಳಬೇಕು. ಮುಂದೆ ಬಂದ ಐದು ಕೃತಿಗಳು ಸಹಜವಾಗಿಯೇ ಇದರ ಭಾಗವಾಗಿವೆ. ಇದಕ್ಕಿಂತ ಮೊದಲು ನಿರ್ಮಿತವಾದರೂ ಈ ಮಾಲೆಯಲ್ಲಿ ಸ್ಥಾನವನ್ನು ಪಡೆದ ಕವನಗಳು ಇಲ್ಲಿ 'ಆಗಂತುಕ' ಕೃತಿಗಳೆಂದು ಬಂದಿಲ್ಲ. ಮುಂದಿರದ ವಾಸ್ತುಶಿಲ್ಪವನ್ನು ಪೋಷಿಸುವ ಗುಣವಿದೆಯೆಂದೇ ಅವಕ್ಕೆ ಇಲ್ಲಿ ಪ್ರವೇಶವಿದೆ. ಅಲ್ಲದೆ ಇಲ್ಲಿ ಸೇರುವದಕ್ಕಿಂತ ಮೊದಲು ಅವು ಇಂಥ ಸೇರ್ಪಡೆಗೆ ಉಚಿತವಾದ ಸಂಸ್ಕಾರವನ್ನು ಹೊಂದಿವೆ. **ತ್ಯಾಗಿ, ಪತಿ, ಗುಂಡೂ ಭಾರತೀಯ,** ಎಂಬ ಕವನಗಳಂತೂ ಹೊಸವು ಎಂಬುವಷ್ಟು ಮಾರ್ಪಟ್ಟಿವೆ. ಅಂತೇ ಇವು ಕವನಮಾಲೆಯ ಏಕಮೇವತೆಗೆ (unity) ಹೊರತಾಗಿಲ್ಲ.

೧

ಈ ಕೃತಿಯ ಸ್ವರೂಪ-ರಚನೆಗಳನ್ನು ಕುರಿತು ಕೆಲವು ಮಾತುಗಳನ್ನು ಇಲ್ಲಿ ಹೇಳುವದು ಅವಶ್ಯವೆಂದು ತೋರಿದೆ. ಆದ ಕಾರಣ ಈ ಪೀಠಿಕೆಯನ್ನು ಬರೆದಿದ್ದೇನೆ.

೨

ಮಹಾಕಾವ್ಯವು (epic) ಪದ್ಯಕಾವ್ಯದ ಒಂದು ಪ್ರಕಾರವಾಗಿದೆ. ಅದು ಯಾವಾಗಲೂ ಮಹೋನ್ನತ ಕಾವ್ಯ (great poetry) ವಿರುವದೆಂದು ಹೇಳಲಾಗದು. ಇಂದಿನ ಯುಗದಲ್ಲಿ ಮಹಾಕಾವ್ಯದ ಪರಂಪರೆಯು ಮೊದಲಿನ ಸ್ವರೂಪದಲ್ಲಿಯೇ ಉಳಿಯುವದು ಕಠಿಣವಾಗಬಹುದು. ಮಹಾಕಾವ್ಯವು ಸಾಧಿಸಬೇಕಾದ ಕಾರ್ಯವೆಂದರೆ ಇದು:

(೧) ತನ್ನ ಯುಗದ ಜೀವಿತದ ಸಾರದ ಪ್ರತಿಬಿಂಬ ಹಾಗು ದರ್ಶನವಾಗುವದು.

(೨) ಇಂಥ ಪ್ರತಿಬಿಂಬ-ದರ್ಶನಗಳನ್ನು ಒಳಪಡಿಸಿಕೊಳ್ಳುವ ಸಾಮರ್ಥ್ಯ-ಅರ್ಥಪೂರ್ಣತೆಗಳಿದ್ದ ಒಂದು ವಸ್ತು ಇಲ್ಲವೆ ಕಥಾನಕವನ್ನು ಪೋಷಿಸುವದು.

(೩) ತನ್ನ ಯುಗದ ಜೀವನದ ಹಿರಿಮೆಯನ್ನು ರೂಪಿಸುವ ವ್ಯಕ್ತಿಗಳನ್ನು ನಿರ್ಮಿಸಿ ಆ ವ್ಯಕ್ತಿಗಳ ವ್ಯಕ್ತಿತ್ವವನ್ನು ಸ್ಮರಣೀಯವಾಗುವಂತೆ ಚಿತ್ರಿಸಿ ಪೋಷಿಸುವದು.

(೪) ಭಾವಗೀತದ ಲಾಲಿತ್ಯ, ದೃಶ್ಯಕಾವ್ಯದ ಸೊಬಗು, ವಿಡಂಬನ, ವಿನೋದ, ತತ್ವನಿರೂಪಣ,— ಇವನ್ನೆಲ್ಲ ಯಥಾಯೋಗ್ಯವಾಗಿ ಅರಗಿಸಿಕೊಂಡು ತನ್ನ ಕಾಂತಿಯನ್ನು ಹೆಚ್ಚಿಸಿಕೊಳ್ಳುವದು.

ಹಿಂದಿನ ಮಹಾಕಾವ್ಯಗಳಲ್ಲಿ ಸಹ ಕೆಲವೊಂದು ಸನ್ನಿವೇಶಗಳನ್ನು ವಿವರಿಸಲು ಗದ್ಯವು ಅವಶ್ಯವೆನಿಸಿ ಚಂಪೂ ಕಾವ್ಯದ ಪ್ರಕಾರವು ಹುಟ್ಟಿತು. ಇಂದಿನ ಯುಗದ ಜೀವಿತದಲ್ಲಿ ಸಂಕೀರ್ಣತೆಯು ಹೆಚ್ಚಿ ಸಮಾಜವು ಬಹುಮುಖವಾಗಿದೆ. ವಿಜ್ಞಾನ-ಅರ್ಥಶಾಸ್ತ್ರ-ರಾಜಕಾರಣಗಳ ವಿಶಿಷ್ಟ ಪ್ರಾದುರ್ಭಾವದಿಂದ ಬಂದೊದಗಿದ ಈ ಸಂಕೀರ್ಣತೆಯನ್ನು ನಿರೂಪಿಸಲು ಪದ್ಯವು ಉಚಿತ ವಾಹಕವಾಗಲಾರದು. ಇಲ್ಲಿ ಗದ್ಯದ ಯೋಜನೆ ಬೇಕು. ಕಾದಂಬರಿಯು ಅರ್ವಾಚೀನ ಕಾಲದ ಮಹಾಕಾವ್ಯದ ಕಾರ್ಯವನ್ನು ಮಾಡಬಲ್ಲದು.

'War and Peace.' 'Forsyte Saga' 'The Brothers Karamazov' ಮೊದಲಾದ ಕಾದಂಬರಿಗಳು ಇದಕ್ಕೆ ನಿದರ್ಶನಗಳಾಗಿವೆ.

ಇನ್ನೊಂದು ದೃಷ್ಟಿಯಿಂದ ನೋಡಿದರೆ, ಇಂದಿನ ಯುಗದ ಜೀವನದಲ್ಲಿ ಆಂತರಿಕತೆಯು ಹೆಚ್ಚಿದೆ. ಬೇರೆ ನಾಯಕವರ್ಗವನ್ನು ನಿರ್ಮಿಸದೆ ಕವಿಯು ತನ್ನ ವ್ಯಕ್ತಿತ್ವಕ್ಕೇ ಪ್ರಾಧಾನ್ಯ ಕೊಟ್ಟು ಮಹಾಕಾವ್ಯವನ್ನು ಬರೆಯುತ್ತಾನೆ. ವರ್ಡ್ಸ್‌ವರ್ಥನ 'The Prelude' ಎಂಬುದು ಇಂಥದೊಂದು ಕೃತಿ.

ಚಾಸರ್ ಕವಿಯು ತನ್ನ 'ಕ್ಯಾಂಟರ್‌ಬರಿ' ಕಥಾಮಾಲಿಕೆಯಲ್ಲಿ ತನ್ನ ಯುಗದ ವೈವಿಧ್ಯವನ್ನೆಲ್ಲ ಪ್ರತಿಭಾಪೂರ್ಣವಾಗಿ ಬಿಂಬಿಸಿದ. ಕೀಟ್ಸ್ ಕವಿಯು 'ಹೈಪೀರಿಯನ್' ಎಂಬ ಕೃತಿಯಲ್ಲಿ ಆಂತರಿಕತೆಯನ್ನೂ ವಸ್ತುಕತೆಯನ್ನೂ ಬೆರಸುವ ಒಂದು ಮಹಾಕಾವ್ಯವನ್ನು ರಚಿಸಲು ಹವಣಿಸಿದ. ಬ್ರೌನಿಂಗ್ ತನ್ನ 'Men and Women' ಹಾಗು 'Dramatis Personae'ದಲ್ಲಿ ಮಹಾಕಾವ್ಯದ ಕೆಲವೊಂದು ಗುಣವಿಶೇಷಗಳನ್ನು ಒಂದು ನವೀನ ಸಾಹಿತ್ಯಪ್ರಕಾರದಲ್ಲಿ ರೂಪಿಸಿದ. ಹಾರ್ಡಿ ತನ್ನ 'The Dynasts' ಎಂಬ ಮಹಾನಾಟಕದಲ್ಲಿ ನೆಪೋಲಿಯನ್ ಯುಗದ ಮಹಾಪೂರವನ್ನು ಸೇರ್ಪಡಿಸಿ ಅದನ್ನೇ ಮಹಾಕಾವ್ಯವಾಗಿಸಲೆಳಸಿದ. ಹೀಗೆ ಮಹಾಕಾವ್ಯದ ಹಾದಿಯಲ್ಲಿ ಇಂದಿಗೆ ನಾವು ಅನೇಕ ಹೊಸ ಸಾಹಸಗಳನ್ನು ಕಾಣುತ್ತೇವೆ.

ಮಹಾಕಾವ್ಯಕ್ಕೆ ಕಥಾವಸ್ತುವೊಂದೇ ಮುಖ್ಯವಲ್ಲ. ಇದು ಹೆಚ್ಚು ಹೆಚ್ಚಾಗಿ ಇಂದು ಕಾದಂಬರಿಗಳ ಸೊತ್ತಾಗಿದೆ. ಪದ್ಯಕಾವ್ಯದಲ್ಲಿ ಇದರ ಯೋಜನೆ ಈಗ ಕಡಿಮೆಯಾಗಹತ್ತಿದೆ. ಮಹಾಕಾವ್ಯದ ಉಳಿದ ಗುಣಗಳನ್ನು ಅರಗಿಸಿಕೊಂಡು ಕಥಾನಕವನ್ನೂ ಅವುಗಳ ಜೊತೆಗೆ ಬೆಳಿಸುವ ಹಾದಿಯಲ್ಲಿ ಸಹ ಪ್ರಯತ್ನಗಳು ನಡೆದಿವೆ.

- ಕಾವ್ಯಕ್ಕೆ 'ಮಹಾ' ಎಂಬ ವಿಶೇಷಣ ಬರಬೇಕಾದರೆ ಮೇಲೆ ಹೇಳಿದಂತೆ ಕಥಾವಸ್ತು, ಯುಗ-ತತ್ವನಿರೂಪಣೆ, ವ್ಯಕ್ತಿತ್ವ-ಚಿತ್ರಣ, ವಿವಿಧ ರಸ ಪೂರ್ಣತೆ,— ಇವು ಎಲ್ಲವಾಗಲಿ ಇಲ್ಲವೆ ಇವುಗಳಲ್ಲಿ ಒಂದಾದರೂ— ಬೇಕಾಗುತ್ತದೆ. ದೃಶ್ಯಕಾವ್ಯಗುಣ, ಕಥಾತ್ಮಕತೆ, ಭಾವಗೀತಮಾಧುರ್ಯ,— ಇವೆಲ್ಲವೂ ಸೇರಿದ್ದು ಕೊನೆಯ ರೂಪದಲ್ಲಿ ಯಾವುದಾದರೂ ಒಂದಕ್ಕೆ ಪ್ರಾಧಾನ್ಯ ಬರುತ್ತದೆ. ಕೃತಿಯು ಸುದೀರ್ಘವಿರಬೇಕೆಂದು ಮೇಲೆಯೇ ಕಾಣುತ್ತದೆ.

ಇಂದಿನ ಕನ್ನಡದಲ್ಲಿಯೂ ಮಹಾಕಾವ್ಯದ ಈ ನವೀನ ರೂಪಗಳು ತಲೆಯೆತ್ತಿವೆ. ಅವುಗಳ ವಿಮರ್ಶೆ ಮಾತ್ರ ಇನ್ನೂ ಬರಬೇಕಾಗಿದೆ. **ಯೆಂಡ್ಗುಡ್ಡ ರತ್ನ, ನಂದಾದೀಪ, ಚಿತ್ರಾಂಗದಾ, ರಾಮಾಯಣ, ಮಂಕು ತಿಮ್ಮನ ಕಗ್ಗ, ನವರಾತ್ರಿ, ಆಕಾಶಗಂಗೆ,**— ಕಾದಂಬರಿಯ ಕ್ಷೇತ್ರದ ಹೊರಗೆ ಮಹಾಕಾವ್ಯದ ಹಾದಿಯಲ್ಲಾದ ಪ್ರಯತ್ನಗಳಿವು. ಇದೀಗ **ಬಾಳ ದೇಗುಲ ದಲ್ಲಿ** ಒಂದು. ಮೇಲೆ ವಿವರಿಸಿದ ಗುಣಗಳ ದೃಷ್ಟಿಯಿಂದ ಇವುಗಳಲ್ಲಿ ನೆಲೆಗೊಂಡ ಸಾಹಿತ್ಯಪ್ರಕಾರದ ರೂಪ-ರೇಷೆಗಳ ಚರ್ಚೆ ಫಲವತ್ತಾಗುವದರಲ್ಲಿ ಸಂಶಯವಿಲ್ಲ. ಈ ಕೃತಿಗಳಲ್ಲಿರಬಹುದಾದ ಮಹೋನ್ನತಿಯ ಚರ್ಚೆಯೊಂದು ಬೇರೆ. ಎಲ್ಲ ಕಾವ್ಯದ ವಿಮರ್ಶೆಯೊಡನೆ ಅದೂ ನಡೆಯಬೇಕಾದುದು.

ರೂಪಕತೆಯಿಂದ ಈ ಹಾದಿಯಲ್ಲಿ ಮುನ್ನುಗ್ಗಿದ **ಮೂರ್ತಿ**, ಶೈಲಿ-ಕಥನಗಳ ಸಂಪತ್ತು-ಸಂಯಮಗಳಿಂದ episode ಇಲ್ಲವೆ ಒಂದು ಮಹಾ ಸನ್ನಿವೇಶದ ಪೂರ್ಣತೆಯನ್ನು ಹೊಂದಿದ **ಮಾದ್ರಿಯ ಚಿತೆ** ಹಾಗು **ಗೋಲ್ಗೊಥಾ** ಮೊದಲಾದ ಕೃತಿಗಳ ಚರ್ಚೆಯೂ ಇಲ್ಲಿ ಮಾರ್ಗದರ್ಶಕವಾಗುವದು.

ಇಂದಿನ ಯುಗದ ಘನತೆ ಹಾಗು ಕವಿಯ ವ್ಯಕ್ತಿತ್ವದ ಹಿರಿಮೆಗಳನ್ನು ಕಾವ್ಯದ ಮಹೋನ್ನತಿಯು ವಿಶೇಷವಾಗಿ ಅವಲಂಬಿಸಿರುತ್ತದೆ. ಆದರೆ ನವೀನ ಸಾಹಿತ್ಯಪ್ರಕಾರಗಳು ತಲೆಯೆತ್ತಿರುವ ಈ ಕಾಲದಲ್ಲಿ ಮಹಾಕಾವ್ಯದ ದೇಹಾಂತರಗಳನ್ನೋ ಅವಸ್ಥಾಭೇದಗಳನ್ನೋ ಚರ್ಚಿಸುವಾಗ ತಪ್ಪು ತಿಳುವಳಿಕೆಗಳನ್ನು ಬೆಳಿಸುವ ವಾದವೆದ್ದೀತೆಂದು ನನಗೆನಿಸುವದಿಲ್ಲ.

೨

**ಬಾಳ ದೇಗುಲದಲ್ಲಿ**ಯ ಏಕಸೂತ್ರವಾವುದೆಂಬುದನ್ನು **ಸಮರ್ಪಣೆ**ಯಲ್ಲಿ ಒಂದು ವಿಧವಾಗಿ ತೋರಿಸಿದೆ.

ಇಲ್ಲಿ ಅಳೆಯಲು ಪ್ರಯತ್ನಿಸಿರುವದು ಬಾಳನ್ನು ನೋಡುವ ದೃಷ್ಟಿಯನ್ನು. ಮಗುವಿನಲ್ಲಿ ಅಂಕುರಿಸಿದ ಈ ದೃಷ್ಟಿ ಮುಕ್ತಜೀವಿಯ ಪೂರ್ಣದೃಷ್ಟಿಯ ವರೆಗೆ ವಿಕಾಸವಾಗುವ ಬಗೆ ಯಾವುದು? ಈ ವಿಕಾಸಕ್ಕೆ ಅದನ್ನು ಮುಟ್ಟಿಸುವದು ಯಾವ ಸೋಪಾನ? ಈ ವಿಧಾನ ನಡೆದಿರುವಾಗ ಮಧ್ಯದಲ್ಲಿ ಬರುವ ಬೇರೆ ಬೇರೆ ಅವಸ್ಥೆಗಳು ಯಾವು? ಬೇರೆ ಬೇರೆ ರಂಗಗಳಲ್ಲಿ ಈ

ದೃಷ್ಟಿಯು ಹೇಗೆ ಪ್ರಕಟಗೊಳ್ಳುತ್ತದೆ? ಒಂದೊಂದು ವ್ಯಕ್ತಿತ್ವ-ವಿಶೇಷದಲ್ಲಿ ಈ ದೃಷ್ಟಿಯು ಯಾವ ಮಟ್ಟಕ್ಕೆ ಬಂದು ಮುಟ್ಟಿರುತ್ತದೆ? ಹೀಗೆ ಮುಗ್ಧತೆಯಿಂದ ಪೂರ್ಣತೆಯ ವರೆಗಿನ ವ್ಯಕ್ತಿತ್ವದ ಪರಿಗಳನ್ನು ಇಲ್ಲಿ ತೆರೆದು ತೋರಿಸುವ ಪ್ರಯತ್ನವಾಗಿದೆ.

ಬಾಳನ್ನು ಅಳೆಯುವ ದೃಷ್ಟಿಗಳು ಅನಂತ. ಎಷ್ಟು ವ್ಯಕ್ತಿಗಳೋ ಅಷ್ಟು ದರ್ಶನಗಳು ಎಂಬ ಮಾತು ಸುಳ್ಳಲ್ಲ. ಕಾಲ-ಜಗಗಳನ್ನೆಲ್ಲ ಮೀರಿ ನಿಂತ ಬಾಳ ವಿವಿಧತೆಯ ಸೊಬಗನ್ನೆಲ್ಲ ಒಬ್ಬ ಕವಿಯು ಮಾತ್ರ ಅಳೆದಾನು. ಅವನೇ ಜಗತ್ತಿನ ಎಲ್ಲ ಕಾಲದ ಎಲ್ಲ ಕವಿಗಳನ್ನೊಳಗೊಂಡ ವಿಶ್ವಕವಿ.

ಆದರೆ ಸಮಗ್ರದೃಷ್ಟಿಯಿಂದ ನೋಡಿದಾಗ ವ್ಯಕ್ತಿಸಮುದಾಯದಲ್ಲಿಯೂ ಕೆಲವೊಂದು ವಿಶಿಷ್ಟ ಪ್ರಕಾರಗಳಿರುವದು ಕಂಡುಬರುತ್ತದೆ. ಯುಗಯುಗಾಂತರದಲ್ಲೆಲ್ಲ ನಡೆದ ವ್ಯಕ್ತಿಯ ದೃಷ್ಟಿ-ವಿಕಸನವು ಕೆಲವೊಂದು ನಿರ್ದಿಷ್ಟ ವಿಧಾನಗಳಲ್ಲಿಯೇ ನಡೆದಿರುವದು ನಮಗೆ ಸ್ಪಷ್ಟವಾಗುತ್ತದೆ. ಹೀಗಾಗಿ ವ್ಯಕ್ತಿತ್ವ-ವಿಕಸನದ ಕೆಲವು ನಿರಂತರ ಮಾದರಿಗಳು ನಮ್ಮ ಕಣ್ಣಿಗೆ ಬೀಳುತ್ತವೆ. ಈ ಮಾದರಿಗಳೇ ಈ ಕವನಮಂದಿರದ ಸ್ತಂಭಗಳೆಂದು ಹೇಳಬಹುದು. ಮಗು, ತಂದೆ, ಕುಮಾರಿ, ಪತಿ, ಕ್ರಾಂತಿಕಾರ, ದಾನಿ, ಜ್ಞಾನಿ, ಸಾಕ್ಷಿಕ, ಕಾವ್ಯಗುರು, ದುಃಖಿ, ಆಳ್ವಾರ–ಇವೆಲ್ಲ ಇಂಥ ಪ್ರಕಾರಗಳು.

ಇಂಥ ಪ್ರಕಾರ ಇಲ್ಲವೆ ಮಾದರಿಗಳಲ್ಲಿಯೂ ಕೆಲವೊಂದು ಗುಂಪುಗಳು ಕಾಣಿಸಿಕೊಳ್ಳುತ್ತವೆ. ಇಂಥ ಒಂದೊಂದು ಗುಂಪಿನಲ್ಲಿ ಒಂದು ಸಮಾನ ಅನುಭವ ಇಲ್ಲವೆ ಗುಣದ ಏಕಸೂತ್ರತೆಯಿರುವದೇ ಅದಕ್ಕೆ ಕಾರಣ. ಉದಾಹರಣಾರ್ಥವಾಗಿ, ಈ ಕೃತಿಯಲ್ಲಿಯ ಮೊದಲನೆಯ ಗುಂಪು ಕೌಟುಂಬಿಕವಾದುದು. ಮಗುವು ಜೀವನವನ್ನು ನೋಡುವ ಬಗೆ ಯಾವುದು? ತಾಯ್ತನದ ತಿರುಳೇನು? ಇವೇ ಮೊದಲಾದ ಪ್ರಶ್ನೆಗಳ ವಿಚಾರಣೆ ಈ ಗುಂಪನ್ನು ಪರಿಶೀಲಿಸಿದಾಗ ಆಗುವದು. ಉಳಿದ ಎಲ್ಲ ಮಾತುಗಳನ್ನು ಬದಿಗಿಟ್ಟು ಆದರ್ಶ ಪಿತ, ಆದರ್ಶ ಮಾತೆ, ಆದರ್ಶ ಪತಿಯಾಗಿರುವದೇ ಜೀವನದಲ್ಲಿ ಅನೇಕರ ಆಕಾಂಕ್ಷೆಯಾಗಿರುತ್ತದೆ. ಇಂಥ ವ್ಯಕ್ತಿಗಳ ನಿದರ್ಶನವೇ ಈ ಕೌಟುಂಬಿಕ ಮಾದರಿಗಳಲ್ಲಿದೆ.

ಎರಡನೆಯ ಗುಂಪು ರಾಜಕೀಯ ಹಾಗು ಸಾಮಾಜಿಕ ಮಾದರಿಗಳದು.

ಈ ಮಾದರಿಗಳು ಒಡಮೂಡಿದ ವ್ಯಕ್ತಿಗಳಲ್ಲಿ ಒಂದು ರಾಜಕೀಯ ಇಲ್ಲವೆ ಸಾಮಾಜಿಕ ವೃತ್ತಿಯೇ ಪ್ರಧಾನವಾಗುತ್ತದೆ. ಅದೇ ಆ ವ್ಯಕ್ತಿಗಳ ಜೀವಿತದ ಅರ್ಥ; ಅದನ್ನೊಂದು ಬಿಟ್ಟರೆ ಆ ಜೀವನಗಳಿಗೆ ಅರ್ಥವಿಲ್ಲ.

ಮೂರನೆಯ ಗುಂಪು ಕಾರ್ಯತತ್ಪರತೆಯ ಸಾಧನೆಯ ಮಾರ್ಗದಲ್ಲಿ ಕಂಡು ಬರುವ ಪ್ರಕಾರಗಳದು. ಸತ್ಯಾಗ್ರಹಿ, ಕರ್ಮಯೋಗಿ, ಇವರ ಜೀವಿತ ದಲ್ಲಿ ಸತ್ಯಾಗ್ರಹ ಹಾಗು ಕರ್ಮಯೋಗವೇ ಮುಖ್ಯವಾದುದು.

ಇದೇ ರೀತಿಯಲ್ಲಿ ನಾಲ್ಕನೆಯ ಗುಂಪು ಜ್ಞಾನೋಪಾಸನೆಯ ಮಾರ್ಗ ದಲ್ಲಿ ಕಳೆಯೇರುವ ಮಾರ್ಗಗಳದು. ಐದನೆಯದು ಸೌಂದರ್ಯೋಪಾಸನೆಯ ಸೋಪಾನದಲ್ಲಿ ಕಂಡಬರುವ ಪ್ರಕಾರಗಳದು. ಆರನೆಯದು ಕೇವಲ ಆಧ್ಯಾತ್ಮಿಕ ದೃಷ್ಟಿಯನ್ನು ಪ್ರಧಾನವಾಗಿಟ್ಟುಕೊಂಡ ಮಾದರಿಗಳದು. ಇಲ್ಲಿಯ ಆಧ್ಯಾತ್ಮಿ ಕತೆ ಒಂದು ವಿಶಿಷ್ಟ ಕರ್ಮ, ಜ್ಞಾನ ಇಲ್ಲವೆ ಸೌಂದರ್ಯಾನುಭವವನ್ನು ಹೊಂದಿಕೊಂಡಿರುವದಿಲ್ಲ. ಆ ಆಧ್ಯಾತ್ಮಿಕತೆಯು ಕರ್ಮ, ಜ್ಞಾನ, ಇಲ್ಲವೆ ಸೌಂದರ್ಯದ ದ್ವಾರವಾಗಿ ಕುದುರಬಹುದು. ಆದರೆ ಅಲ್ಲಿ ಪ್ರಧಾನತೆ ಇರುವದು ಕೇವಲ ಹಾಗೆ ಕುದುರಿದ ಆಧ್ಯಾತ್ಮಿಕತೆಗೆ; ಕುದುರಿಸಿದ ಕರ್ಮ, ಜ್ಞಾನ ಇಲ್ಲವೆ ಸೌಂದರ್ಯಕ್ಕೆ ಆ ಪ್ರಾಧಾನ್ಯವು ಒದಗುವದಿಲ್ಲ. ಇದು ಅನುಭಾವದ ಹಾದಿಯ ಒಂದು ಲಕ್ಷಣ.

ಭಕ್ತಿಯೂ ಕರ್ಮ-ಜ್ಞಾನ-ಸೌಂದರ್ಯಗಳಂತೆ ಒಂದು ವಿಶಿಷ್ಟ ಮಾರ್ಗ. ಅದರಲ್ಲಿ ಸೌಂದರ್ಯೋಪಾಸನೆಯ ಭಾವನಾಪರವಶತೆಯೂ ಅನು ಭಾವದ ಅನನ್ಯ ಆಧ್ಯಾತ್ಮಿಕತೆಯೂ ಸಮಾವೇಶವಾಗಿವೆ. ಈ ಮಾದರಿಯು **ಭಕ್ತ** ಎಂಬ ಕವನದಲ್ಲಿ ಕೆಲವು ಮಟ್ಟಿಗೆ ಚಿತ್ರಿತವಾಗಿದೆ.

ಏಳನೆಯ ಗುಂಪು ಮುಕ್ತಜೀವಿಗಳದು. ಶಿಶುವಿನಲ್ಲಿ ಉಗಮಿಸಿದ ಜೀವನದೃಷ್ಟಿಯ ಸಾಫಲ್ಯ ಇಲ್ಲಿ ಕಾಣಿಸಿಕೊಳ್ಳುತ್ತದೆ. ಈ ದೃಷ್ಟಿಯೇ ಬಾಳಿನ ಕಿರೀಟದಲ್ಲಿಯ ರತ್ನ. ಕೌಟುಂಬಿಕತೆ, ಸಾಮಾಜಿಕತೆ, ಕರ್ಮ, ಜ್ಞಾನ, ಸೌಂದರ್ಯ ಅನುಭಾವ, ಇವೆಲ್ಲ ಕೊನೆಗೆ ಮುಕ್ತಾಯವಾಗುವದು ಮುಕ್ತ ಜೀವನದಲ್ಲಿ. ಕೌಟುಂಬಿಕತೆ ಹಾಗು ಸಾಮಾಜಿಕತೆಗಳನ್ನು ನಾನು ಉಳಿದವು ಗಳೊಡನೆ ವಿಶಿಷ್ಟ ಯೋಗಗಳೆಂದು ಹೇಳಬಯಸುವದಿಲ್ಲ. ಕರ್ಮ-ಜ್ಞಾನ-ಸೌಂದರ್ಯ-ಅನುಭಾವಗಳ ಪೂರ್ಣದೃಷ್ಟಿ ವ್ಯಕ್ತಿಯಲ್ಲಿ ಮೂಡಿದಾಗ ಆ

೩

ದೃಷ್ಟಿಗೆ ತನ್ನ ಆವರಣವನ್ನು ಅನುರೂಪಿಸಿಕೊಳ್ಳಲು ಅವನು ಹವಣಿಸುತ್ತಾನೆ. ಕುಟುಂಬವೂ ಸಮಾಜವೂ ಈ ಹವಣಿಕೆಯ ರಂಗಸ್ಥಲಗಳಾಗಿವೆ.

ಹೀಗೆ ಬಾಳನ್ನು ಅಳೆದು ಅರಗಿಸಲು ಹೊರಟ ಮಾನವೀಯ ವೃತ್ತಿಗಳು ತಾವೆ ಪ್ರಧಾನವಾಗಿ ನಿಂತ ಪ್ರಕಾರಗಳನ್ನು ನಾವಿಲ್ಲಿ ಕಾಣಬಹುದು. ಅಸುರನಲ್ಲಿ ಸಹ ಇಲ್ಲ ಆಸುರೀ ಗುಣಗಳೂ ಈ ದೃಷ್ಟಿಯನ್ನು ಮರೆಯಾಗಿಸುವದಿಲ್ಲ. ಈ ದೃಷ್ಟಿಯಿಲ್ಲದ ಯಾವ ಸ್ವಭಾವ-ವಿಶೇಷಕ್ಕೂ ಇಲ್ಲಿ ಸ್ಥಾನವಿಲ್ಲ. ಅಂಥ ಸ್ವಭಾವಗಳಿಗೆ ಪೃಥ್ವಿಯು ಬಾಳದೇಗುಲವಲ್ಲ; ಅದೊಂದು ಮೈದಾನ, ತಾಮಸದ ಪಟಾಂಗಣ.

ಪುರುಷನಿಗೆ ಅರ್ಪಿಸಲೆಂದು ಪರಾಪ್ರಕೃತಿಯು ರಚಿಸಲು ಹವಣಿಸುತ್ತಿರುವ ರತ್ನಹಾರವೇ ಈ ಮಾದರಿಗಳ ಮಾಲಿಕೆ. ಸೃಷ್ಟಿಯ ಆದಿಯಿಂದಲೂ ಈ ವಿವಿಧ ಜೀವಜಾತಿಗಳನ್ನರಳಿಸಿ ತೋರಿಸಲೆಂದು ಅಸಂಖ್ಯಾಕ ಜೀವಗಳು ಹುಟ್ಟಿ ಮಾಯವಾಗುವವು. ಇದು ಮಾನವಜಾತಿಯ ಚಿರಂತನ ಅನುಭವ. ಈ ಅನುಭವದ ಕಾಸಾರದಲ್ಲಿ ಇನ್ನೂ ಅರಳಲಿರುವ ಕಮಲಗಳೂ ಅಸಂಖ್ಯಾಕವಾಗಿವೆ.

೪

ಈ ಚಿರಂತನ ಮಾದರಿಗಳು ಸಜೀವವಾಗುವದು ಒಂದು ವಿಶಿಷ್ಟಯುಗದ ಆವರಣವನ್ನು ಹೊಂದಿಕೊಂಡು. ವ್ಯಕ್ತಿಗಳನ್ನರಿಯದೆ ಈ ಮಾದರಿಗಳನ್ನು ನಾವು ತಿಳಿಯುವದು ಸಾಧ್ಯವಿಲ್ಲ. ಒಂದು ದೃಷ್ಟಿಯಿಂದ ಈ ಮಾದರಿಗಳ ಪಡಿಯಚ್ಚಿನಲ್ಲಿಯೇ ವ್ಯಕ್ತಿಗಳು ಜನಿಸಿದರೆಂದು ನಾವು ಗ್ರಹಿಸಬೇಕಾಗಬಹುದು. ಆದರೆ ಬೇರೆ ಬೇರೆ ಯುಗಗಳ ವಿವಿಧ ವ್ಯಕ್ತಿಗಳನ್ನು ಆಳವಾಗಿ ತಿಳಿಯದೆ ಈ ಮಾದರಿಗಳು ನಮಗೆ ಕಾಣಿಸಿಕೊಳ್ಳುತ್ತಿರಲಿಲ್ಲ.

ವ್ಯಕ್ತಿತ್ವದ ಪೋಷಣವಿಲ್ಲದಾದರೆ ಈ ಮಾದರಿಗಳು ಬರಿ ಶೂನ್ಯ. ಮಾದರಿಗಳು ಒಂದು ಭಾಷೆಯ ಲಿಪಿಯ ಅಕ್ಷರಗಳಿದ್ದಂತೆ. ಇಂಥವು ಕೆಲವೊಂದು ಕೂಡಿಕೊಂಡಾಗ ಒಂದು ಶಬ್ದವಾಗಿ ಸಂಕೀರ್ಣತೆಯು ಉದ್ಭವಿಸುತ್ತದೆ. ಹಾಗೆಯೇ ಒಂದು ಅಕ್ಷರದ ನಾದ-ಬಿಂದು-ಕಲೆಗಳನ್ನು ಗುರುತಿಸಿ ಅವುಗಳ ಬೆಳಕಿನಲ್ಲಿ ಆ ಅಕ್ಷರವನ್ನು ಕಂಡಾಗ ಅದು ಅರ್ಥಪೂರ್ಣವಾಗುತ್ತದೆ.

ಮಹಾ ಕಾರಣವು ಸೂಕ್ಷ್ಮ-ಸ್ಥೂಲಗಳಲ್ಲಿ ಪ್ರಕಟವಾಗದ ಹೊರತು ಬುದ್ಧಿಗೂ ಕಲ್ಪನಾಶಕ್ತಿಗೂ ನಿಲುಕಲಾರದು. ಮಾದರಿಗಳನ್ನು ವ್ಯಕ್ತಿತ್ವದ ರೂಪವಂತಿಕೆಯಲ್ಲಿಯೂ ವ್ಯಕ್ತಿತ್ವಗಳನ್ನು ಮಾದರಿಗಳ ಬೆಳಕಿನಲ್ಲಿಯೂ ಕಾಣದ ಹೊರತು ಕಲೆಯು ಮೂರ್ತಿಮಂತವಾಗಲಾರದು.

ಈ ಕೃತಿಯು ಈ ರೀತಿಯ ವ್ಯಕ್ತಿತ್ವ-ಮಾದರಿಗಳ ಸಮ್ಮಿಲನದಿಂದ ಹುಟ್ಟಿ ಬಂದಿದ್ದು. ನಾನು ಕಂಡು ಅನುಭವಿಸಿದ ವ್ಯಕ್ತಿತ್ವವೇ ಅದರ ಮಾದರಿಯನ್ನು ನಾನು ಚಿತ್ರಿಸಲು ಹವಣಿಸುವಂತೆ ಮಾಡಿದೆ; ನಾನು ಮನಸೋತ ಮಾದರಿಯೇ ಅದಕ್ಕೆ ಅನುರೂಪವಾದ ವ್ಯಕ್ತಿತ್ವವನ್ನು ತಿಳಿಯುವ ಕಂಣನ್ನು ಕೊಟ್ಟಿದೆ. ಅರ್ಥಾತ್ ಇಲ್ಲಿ ಬರುವ ವ್ಯಕ್ತಿತ್ವಗಳು ಈ ಯುಗವನ್ನು ಹೊಂದಿಕೊಂಡು ನಿಂತಿವೆ. ಚಿರಂತನ ಮಾನವೀಯ ಅನುಭವದಂತೆ ಒಂದು ಯುಗದ ವಿಶೇಷ ಅನುಭವವೂ ಕಾವ್ಯದ ಅಂಗಗಳಲ್ಲಿ ಒಂದು. ಚಿರಂತನ ತತ್ವಸಾರದಂತೆ ಒಂದು ಯುಗದಲ್ಲಿ ತತ್ವವು ಧರಿಸುವ ವಿಶಿಷ್ಟ ರೂಪವೂ ಕಾವ್ಯದಲ್ಲಿ ಸಹಜವಾಗಿ ಬರುವದು. **ಕುಮಾರಿ, ತಂದೆ, ಹಿಂದೂ ಭಾರತೀಯ, ವಿಜ್ಞಾನಿ, ಸಮತಾವಾದಿ,**— ಇವೇ ಮೊದಲಾದ ಕವನಗಳಲ್ಲಿ ಈ ಯುಗದ ಆವರಣವು ವಿಶೇಷವಾಗಿ ಕಂಡುಬರುವದು.

ವ್ಯಕ್ತಿತ್ವ-ಮಾದರಿಗಳ ಮಿಲನವು ಒಂದೊಂದು ಕವನದಲ್ಲಿ ಒಂದೊಂದು ಅಂಶದಲ್ಲಿ ಬಂದಿದೆ. **ಅಮರ, ಕಾವ್ಯಗುರು, ಸುಧಾರಕ, ಉದಾರಚರಿತ** ಮೊದಲಾದ ಕವನಗಳಲ್ಲಿ ವ್ಯಕ್ತಿತ್ವವೇ ಪ್ರಧಾನವಾಗಿ ಕಣ್ಣೆದುರು ನಿಂತಿದ್ದು ಮಾದರಿಯು ಹಿನ್ನೆಳಲಾಗಿ ಇಲ್ಲವೆ ಧ್ವನಿಯಾಗಿ ಬಂದಿದೆ. ಆದರೆ ಅದು ಹಿನ್ನೆಳಲು ಇಲ್ಲವೆ ಧ್ವನಿಯಾಗಿದೆಯೆಂಬುದನ್ನು ತಿಳಿಯದೆ, ಇವೇ ಮೊದಲಾದ ಕವನಗಳು ಸಂಪೂರ್ಣವಾಗಿ ಅರ್ಥವಾಗುವದು ಸಾಧ್ಯವಿಲ್ಲ. **ಕಾವ್ಯಗುರು** ಎಂಬ ಕವನವು ಬೇರೆ ಕೆಲವು ಕವನಗಳೊಡನೆ ಒಂದು ಸಂದರ್ಭದಲ್ಲಿ ಈ ಮೊದಲು ಪ್ರಕಟವಾದಾಗ ಇದರಲ್ಲಿ ಮಿತಿಮೀರಿದ ಪ್ರಶಂಸೆಯಿದೆಯೆಂದು ಕೆಲವು ವಿಮರ್ಶಕರು ಅದನ್ನು ಟೀಕಿಸಿದರು. ಆದರೆ ಅದು ಪ್ರಕಟವಾದ ಶುಭ ಪ್ರಸಂಗಕ್ಕಿಂತ ಮೂರು ವರ್ಷ ಮೊದಲೇ ಆ ಕವನವು ರಚಿತವಾಗಿತ್ತೆಂಬುದು ಆ ವಿಮರ್ಶಕರಿಗೆ ಸ್ವಾಭಾವಿಕವಾಗಿಯೇ ಗೊತ್ತಿರಲಿಲ್ಲ. ಇನ್ನೂ ಕಾವ್ಯದ ಸೂಕ್ಷ್ಮತೆಯನ್ನು ತಿಳಿಯುವ ಬಗೆ ನಮ್ಮ ನಾಡಿನಲ್ಲಿ ಜನಸಾಮಾನ್ಯವಾಗಿಲ್ಲ.

ಆದಕಾರಣ ಇಂಥ ಕೆಲವು ಕವನಗಳ ಬಗ್ಗೆ ಇಲ್ಲಿ ಒಂದು ಮಾತನ್ನು ಹೇಳ ಬೇಕಾಗುತ್ತದೆ. ಅವುಗಳಲ್ಲಿ ವಸ್ತುವಿನ ಭಾಗವಾಗಿ ಬರುವ ವ್ಯಕ್ತಿಯ ಬಗ್ಗೆ ಸ್ತುತಿ ಬಹಳವಾಗಿದೆಯೆಂದು ಓದುಗರಿಗೆನಿಸಿದರೆ ಅವರು ತಮತಮಗೆ ಯೋಗ್ಯ ವೆನಿಸಿದ ಪ್ರಮಾಣದಲ್ಲಿ ಆ ಪ್ರಶಂಸೆಯನ್ನು ವ್ಯಕ್ತಿಗೆ ಹಂಚಿಕೊಟ್ಟು ಉಳಿದು ದನ್ನೆಲ್ಲ ಆ ವ್ಯಕ್ತಿ-ಚಿತ್ರಣದ ಪ್ರಾಣದಂತಿದ್ದ ಮಾದರಿಗೆ ಮೀಸಲಿಟ್ಟು ಬಿಡಲಿ. ಈ ಕೃತಿಯಲ್ಲಿ ಮುಖ್ಯವಾದದ್ದು ವ್ಯಕ್ತಿಯ ವಿಮರ್ಶೆ ಇಲ್ಲವೆ ಪ್ರಶಂಸೆಯಲ್ಲ; ಆ ವ್ಯಕ್ತಿ-ಮಾದರಿಗಳಲ್ಲಿ ಸ್ಫುಟವಾಗಿ ನಿಂತ ದೃಷ್ಟಿ, ಜೀವನ-ದರ್ಶನ. **ಜ್ಞಾನಿ, ದಾನಿ,** ಮೊದಲಾದ ಕವನಗಳಲ್ಲಿ ಮಾದರಿಯೇ ಪ್ರಧಾನತೆಯನ್ನು ಹೊಂದಿ ಪುಷ್ಟವಾಗಿಸಲೆಂದು ಮಾತ್ರ ಅಲ್ಲಲ್ಲಿ ವ್ಯಕ್ತಿತ್ವಗಳಿಂದ ಹೂರಣವನ್ನು ತೆಗೆದುಕೊಂಡಿದೆ. ಅಂತೂ ವ್ಯಕ್ತಿತ್ವ-ಮಾದರಿಗಳ ನಡುವೆ ಈ ಕೃತಿಯ ಹೆಣಿಕೆ ತೂಗುಯ್ಯಾಲೆಯಾಡುತ್ತದೆ.

ಇದರಲ್ಲಿ **ಕುಮಾರಿ, ಕ್ರಾಂತಿಕಾರ, ಸಮತಾವಾದಿ** ಮೊದಲಾದ ಕೆಲವೊಂದು ಕವನಗಳಲ್ಲಿಯೇ ಈ ಯುಗದ ತತ್ವಾಂಶವು ಹೆಚ್ಚಾಗಿ ತೋರಿ ಬಂದರೂ ಈ ಕವನಮಂದಿರವು ಇಂದಿನ ಯುಗ-ಜಗಗಳ ಕಾಣ್ಕೆಗಳ ಮೊಗ ಸಾಲೆಯೆಂದು ತಿಳಿಯಲು ಒಂದು ಕಾರಣವಿದೆ. ಈ ಕೃತಿಯಲ್ಲಿ ಚಿತ್ರಿಸಿದ ಎಲ್ಲ ದರ್ಶನಗಳೂ ಮನುಕುಲದ ಆದಿಯಿಂದ ವಿಕಸನ ಹೊಂದಿ ಜೀವಜಾತಿ ಗಳಾಗಿ ಕಾಣಿಸಿಕೊಂಡು ಅಸಂಖ್ಯಾಕ ವ್ಯಕ್ತಿಗಳಲ್ಲಿ ಅರಳುತ್ತಲಿವೆ. ಮನು ಕುಲದ ಭಾಗ್ಯವು ಇನ್ನೂ ವಿಶಾಲವಾಗಿ ತೆರೆದಂತೆ ಸೂಕ್ಷ್ಮತರವಾದ ಮಾದರಿ ಗಳು ತಲೆಯೆತ್ತಬಹುದು. ಆದರೆ ಪ್ರತಿಯೊಂದು ಯುಗದಲ್ಲಿಯೂ ಈ ಮಾದರಿ ಗಳು ಸೋದಾಹರಣವಾಗಿ ಕಾಣಿಸಿಕೊಂಡಿವೆ. ಅದರಲ್ಲಿಯೂ ಇಂದಿನ ಭಾರತ ದಲ್ಲಿ ಇದೀಗ ಪುನರುಜ್ಜೀವನದ ಯುಗವಾಗಿದೆ. ಭಾರತದ ಪ್ರತಿಯೊಂದು ಪ್ರಾಂತದಲ್ಲಿ ಒಂದು ಉಜ್ವಲವಾದ ಜೀವನವು ರೂಪುಗೊಂಡಿದೆ. ಸೂಕ್ಷ್ಮ-ವಾಗಿ ಪರಿಶೀಲಿಸಿದಲ್ಲಿ ಈ ಮಾದರಿಗಳು ಪ್ರತಿಯೊಂದು ಪ್ರಾಂತದಲ್ಲಿ ತಮ್ಮ ವಿಭೂತಿಗಳನ್ನು ಕಳಿಸಿವೆ. ಒಂದು ಪ್ರಾಂತದ ಉಜ್ಜೀವನದ ಚಿತ್ರಣವೇ ಇಂದಿನ ಭಾರತೀಯ ಪುನರುಜ್ಜೀವನದ ಸಂಕ್ಷಿಪ್ತ ಚಿತ್ರಣವಾಗಿದೆ. ಈ ಕೃತಿ ಯಲ್ಲಿ ಕಾಣಿಸಿದ ದರ್ಶನಗಳೆಲ್ಲ ಈ ಪುನರುಜ್ಜೀವನದ ಸಾಹಸದಲ್ಲಿ ಸಹಾಯ ಕಾರಿಯಾಗಿವೆ.

ಹೀಗೆ ಈ ಕೃತಿಯ ಕಾವ್ಯವಸ್ತುವು ಒಂದು ದೃಷ್ಟಿಯಿಂದ ಚಿರಂತನ ವಾದರೂ ಇನ್ನೊಂದು ದೃಷ್ಟಿಯಿಂದ ಈ ಯುಗಕ್ಕೆ ನಿಕಟವಾಗಿ ಸಂಬಂಧಿಸಿದೆ. ರಾಮಚಂದ್ರ, ಶ್ರೀಕೃಷ್ಣ, ಜನಕರಾಯ ಮೊದಲಾದ ಮಹಾವ್ಯಕ್ತಿಗಳ ಬೆಳಕಿ ನಲ್ಲಿ ಈ ಮಾದರಿಗಳನ್ನು ಚಿತ್ರಿಸುವದೆಂದರೆ ಒಂದು ರೀತಿಯಿಂದ ಕಾವ್ಯವಸ್ತು ವಿನ ಮಹತಿಯು ಹೆಚ್ಚಿದರೂ ಅದು ಚರ್ವಿತ ಚರ್ವಣವಾಗದೆ ಗತ್ಯಂತರ ವಿಲ್ಲ. ಆಗ ಉಳಿದ ವಸ್ತುವಿನಲ್ಲಿಯಂತೆ ಕಾವ್ಯದ ಅಂತರಾತ್ಮವು ಬೆಳಗಿದರೂ ಅದರ ದೇಹರಚನೆಯು ಸಾಂಪ್ರದಾಯಿಕವಾಗುವದು. ಹೆಚ್ಚು ಮಾನವೀಯ ಹಾಗು ವಾಸ್ತವಿಕವಾದ ಕಾವ್ಯವಸ್ತುವಿನ ಆಯ್ಕೆಯು ಇಂದಿನ ಕಾವ್ಯದ ಅಭಿರುಚಿ-ನವೀನತೆಗಳ ಒಂದು ಫಲವಾಗಿದೆ.

ಅಂತೂ ಈ ಕೃತಿಯಲ್ಲಿ ಕಾಣಿಸಿದ ದರ್ಶನದ ಚಿರಂತನತೆಯು ಈ ಯುಗದ ವಿಶೇಷ ಆವರಣವನ್ನು ತಳೆದು ಪ್ರಕಟವಾಗುತ್ತದೆ.

ಈ ಯುಗದ ಯುಗಪುರುಷರೂ ಇಲ್ಲಿ ತಮ್ಮ ಪ್ರಭೆಯನ್ನು ಬೀರಿದ್ದಾರೆ; ಅಂಶತಃ ಈ ಕೃತಿಯನ್ನು ಪ್ರವೇಶಿಸಿದ್ದಾರೆ. ರವೀಂದ್ರರು, ಮಹಾತ್ಮಾಜಿ ಯವರು, ಶ್ರೀ ಅರವಿಂದರು ತಮ್ಮದೇ ಆದ ಒಂದು ಮಹೋನ್ನತ ಸಾಹಿತ್ಯ ವನ್ನು ಬೆಳಗಿಸಿದ್ದಾರೆ. ಅವರ ಸುತ್ತಲೂ ವಿವಿಧವಾದ ಸಾಹಿತ್ಯವು ಬೆಳೆದಿದೆ. ಆದರೆ ಇಂದಿನ ಯುಗದ ಸತ್ವದ ಒಂದೊಂದು ಕಣವೂ ಅವರ ತೇಜದಲ್ಲಿ ಮಿಂದು ಪುನೀತವಾಗದೆ ಇಲ್ಲ. ಈ ಕೃತಿಯಲ್ಲಿ ಅವರು ಅವತರಿಸಿಲ್ಲ; ಆದರೆ ಚೇತನರೂಪದಿಂದ ಅದನ್ನು ತುಂಬಿದ್ದಾರೆ.

೫

ಈ ಕವನಗಳ ತಂತ್ರವನ್ನು ಕುರಿತು ಕೆಲವೊಂದು ಮಾತುಗಳನ್ನು ಇಲ್ಲಿ ಹೇಳುವದು ಅಪ್ರಸ್ತುತವಾಗಲಾರದು. ವ್ಯಕ್ತಿತ್ವ-ಮಾದರಿಗಳ ಮಿಲನವೇ ಇಲ್ಲಿಯ ಚಿತ್ರಣದ ತಿರುಳೆಂದು ಹೇಳಿತಷ್ಟೆ. ಈ ಮಿಲನ ಬೇರೆ ಬೇರೆ ಬಗೆಯಲ್ಲಿ ಪ್ರಕಟದಾಗುವದು ಸಹಜವಾಗಿದೆ. ಪ್ರಾಯಶಃ ಇಲ್ಲಿಯ ಒಂದೊಂದು ಕವನವೂ ಒಂದೊಂದು ವಿಧಾನವನ್ನು ಅವಲಂಬಿಸಿದೆ. ಆದರೆ ಅಲ್ಲಿ ಕಂಡು ಬರುವ ಸಾಮ್ಯಗಳನ್ನು ನೋಡಿಕೊಂಡು ಈ ತಂತ್ರದಲ್ಲಿ ಕೆಲವೊಂದು ವಿಭಾಗ ಗಳನ್ನು ನಾವು ಕಾಣಬಹುದು.

ಉದಾಹರಣಾರ್ಥವಾಗಿ, **ಕಾವ್ಯಗುರು, ಸಾಕ್ಷಿಕ, ಉಪದೇಶಕ, ದಾನಿ, ಆಳ್ವಾರ**,— ಇವೇ ಮೊದಲಾದ ಕವನಗಳು ತಂತ್ರದಲ್ಲಿ ಒಂದೆ ಜಾತಿಯವು. ಇಲ್ಲಿ ಒಂದು ಮಾದರಿಯ ಚಿತ್ರಣಕ್ಕಾಗಿ ಒರ್ವ ವ್ಯಕ್ತಿಯ ಜೀವನದ ಸಾರವನ್ನು ಉಪಯೋಗಿಸಿಕೊಂಡಿದೆ. ಆ ಜೀವನದ ಅರ್ಥವನ್ನು ವಿವರಣಪೂರ್ವಕವಾಗಿ ತೋರಿಸುತ್ತ ಹೋದಾಗ ಅಡಕವಾಗಿದ್ದ ಮಾದರಿಯು ತಾನಾಗಿಯೇ ಸ್ಫುಟವಾಗಿ ನಿಲ್ಲುತ್ತದೆ. ಈ ಅರ್ಥವನ್ನು ವಿವರಿಸಲು ಕೆಲವೊಂದು ಸನ್ನಿವೇಶಗಳ ನಿರೂಪಣೆ ಇಲ್ಲವೆ ಯೋಜನೆಯಾಗಬಹುದು. **ಜ್ಞಾನಿ** ಒರ್ವ ಕಾಲ್ಪನಿಕ ವ್ಯಕ್ತಿ. ಆದರೆ ಅನೇಕ ಸನ್ನಿವೇಶಗಳಿಂದ ಅಲ್ಲಿ ಕಾಣಿಸುವ ಮಾದರಿಯನ್ನು ಸ್ಫುಟವಾಗಿಸುವ ಹವಣಿಕೆಯಿದೆ.

**ಅನ್ಯಾನುರಕ್ತ ಪತಿ**, ತಂದೆ, **ಅಸುರ, ಸತ್ಯಾಗ್ರಹಿ,** ಇವೇ ಮೊದಲಾದ ಕವನಗಳಲ್ಲಿ ಬರಿ ಒಂದು ಸನ್ನಿವೇಶವನ್ನು ಕಲ್ಪಿಸಿ ಇಲ್ಲವೆ ತೆಗೆದುಕೊಂಡು ಅದರ ಮುಖಾಂತರವಾಗಿ ವ್ಯಕ್ತಿತ್ವ-ಮಾದರಿಗಳನ್ನು ನಿರೂಪಿಸುವ ಹವಣಿಕೆಯಿದೆ.

**ಕುಮಾರಿ, ತಾಯಿ,** ಕ್ರಾಂತಿಕಾರ, ಸಮತಾವಾದಿ, **ವಿಜ್ಞಾನಿ, ದುಃಖಿ,** ಇವೇ ಮೊದಲಾದ ಕವನಗಳಲ್ಲಿ ಚರಿತ್ರ ಇಲ್ಲವೆ ಸನ್ನಿವೇಶದ ಅಂಶವಿಲ್ಲ. ಆ ಆ ಮಾದರಿಗಳ ಭಾವ-ತತ್ವಗಳ ನಿವೇದನೆಯ ಮೂಲಕ ಆ ಮಾದರಿಗಳಿಗೆ ಒಂದು ಮೂರ್ತಿಮಂತತೆಯನ್ನು ತಂದು ಕೊಡಲು ಹವಣಿಸಿದೆ ಇಲ್ಲಿಯ ವ್ಯಕ್ತಿತ್ವವು ಒಂದು ದೃಷ್ಟಿಯಿಂದ ಭಾವ-ವ್ಯಕ್ತಿತ್ವವಾಗಿದೆ.

ಇಲ್ಲಿ ಇನ್ನೂ ಒಂದು ವಿವರಣೆಯನ್ನು ಮಾಡಬಹುದು. **ಅಸುರ** ಕವನದಲ್ಲಿ ಕಥನವೂ ಸಂಭಾಷಣೆಯೂ ಪ್ರಧಾನವಾದರೆ **ತಂದೆ, ಸಮತಾವಾದಿ, ಕ್ರಾಂತಿಕಾರ** ಮೊದಲಾದವು ಸ್ವಗತಪರ ಕವನಗಳಾಗಿವೆ. ಇಲ್ಲಿ ಆ ಮಾದರಿ-ವ್ಯಕ್ತಿಗಳ ಪಿಂಡವೇ ಮಾತಾಡುತ್ತದೆ; ತನ್ನ ಅನುಭವಸಿದ್ಧ ತತ್ವವನ್ನು ವಿವರಿಸುತ್ತದೆ. **ಕಾವ್ಯಗುರು, ಉದಾರಚರಿತ, ರೂಪಾರಾಧಕ** ಮೊದಲಾದ ಕವನಗಳಲ್ಲಿ ಕವಿಯು ಈ ಮಾದರಿ-ವ್ಯಕ್ತಿಗಳ ಪಿಂಡವನ್ನು ಸಂಬೋಧಿಸಿ ಅದನ್ನು ಕುರಿತು ತನ್ನಲ್ಲಿ ಉದ್ಭವಿಸಿದ ಭಾವನೆಗಳನ್ನು ನಿರೂಪಿಸುತ್ತಾನೆ.

**ಸನಾತನಿ-ವಿನೂತನಿ** ಹಾಗು **ಕವಿ-ಅನುಭಾವಿ**ಯಲ್ಲಿ ಎರಡು ಮಾದರಿ

ಗಳನ್ನು ಹೋಲಿಸುವಾಗ ಅವುಗಳ ನಡುವಿರುವ ಭೇದವನ್ನೂ ಒಂದೊಂದರ ರೀತಿಯನ್ನೂ ತೋರಿಸಿದೆ.

ಪ್ರಾಯಶಃ ಇಲ್ಲಿಯ ಒಂದೊಂದು ಕವನದಲ್ಲಿಯೂ ಒಂದೊಂದು ವಿಧಾನವಿದೆಯೆಂದು ಹೇಳಿತಷ್ಟೆ. ವಿಷಯನಿರೂಪಣದ ಪದ್ಧತಿ, ರೂಪಕ-ಸನ್ನಿವೇಶಗಳ ಯೋಜನೆ, ಬಳಸಿದ ರಸ-ಭಾವಗಳ ಸ್ವರೂಪ, ಇವುಗಳ ಮೇಲಿಂದ ಆ ಅನನ್ಯತೆಯನ್ನು ನಿರ್ಣಯಿಸಬೇಕಾಗುತ್ತದೆ. ಇದನ್ನು ಕುರಿತು ನಾನು ಇಲ್ಲಿ ಹೆಚ್ಚಿಗೆ ಹೇಳಬೇಕಾಗಿಲ್ಲ.

೬

ಈ ಕೃತಿಯ ಶೈಲಿ-ಛಂದಸ್ಸುಗಳನ್ನು ಕುರಿತು ಒಂದೆರಡು ವಿಚಾರಗಳನ್ನು ಇಲ್ಲಿ ಮಂಡಿಸಬಹುದು. ಇಂದಿನ ಕನ್ನಡ ಕಾವ್ಯದಲ್ಲಿ ಅನೇಕ ಶೈಲಿಗಳು ಉದ್ಭವಿಸಿವೆ. ರಾಮಾಶ್ವಮೇಧದ ಹಳಗನ್ನಡ, ಅಶ್ವತ್ಥಾಮನ್‌ದ ಪೂರ್ವದ ಹಳಗನ್ನಡ ಸೊಬಗಿನಬಳ್ಳಿಯ ಅಚ್ಚಗನ್ನಡ, ಅಪಲ್ಕ್ಯ-ಪಾಂಚಜನ್ಯದಲ್ಲಿಯ ಸಂಸ್ಕೃತ-ಕನ್ನಡ, ಬೇಂದ್ರೆಯವರ ಜಾನಪದ ಗೀತಗಳಲ್ಲಿಯ ತಿರುಳ್ಗನ್ನಡ, ಯೆಂಡ್ಕುಡ್ಕ ರತ್ನದಲ್ಲಿಯ ಬಳಕೆಗನ್ನಡ, ಮಾಸ್ತಿಯವರ ಕಥನಾತ್ಮಕ ಕವನಗಳಲ್ಲಿಯ ಪ್ರಚಲಿತ ಕನ್ನಡ, ಇವು ಮುಖ್ಯವಾಗಿ ಕಂಡುಬರುವ ಕೆಲವು ಪ್ರಕಾರಗಳಾಗಿವೆ. ಈ ಎಲ್ಲ ಅಂಶಗಳನ್ನು ಬೇರೆಬೇರೆ ಪ್ರಮಾಣದಲ್ಲಿ ಬಳಸಿಕೊಂಡು ಮೇಲೆ ಉಲ್ಲೇಖಿಸಿದ ಕೃತಿಗಳ ಕರ್ತೃಗಳೂ ಉಳಿದ ಕವಿಗಳೂ ತಮ್ಮದೇ ಆದ ಒಂದು ಕಾವ್ಯಶೈಲಿಯನ್ನು ನಿರ್ಮಿಸಹತ್ತಿದ್ದಾರೆ.

ಈ ಕೃತಿಯ ಶೈಲಿಯ ತಳಹದಿಯೆಂದರೆ ಇಂದಿನ ಸುಸಂಸ್ಕೃತ ಕನ್ನಡಿಗರು ಆಡುತ್ತಿರುವ ಕನ್ನಡ. ವಸ್ತುವಿನ ನಿರೂಪಣೆಗೆ ತಕ್ಕಂತೆ ಕಾವ್ಯಶೈಲಿಯ ಉಳಿದ ಅಂಶಗಳು ಇಲ್ಲಿ ಆನುಷಂಗಿಕವಾಗಿ ಸೇರ್ಪಡೆಯಾಗುತ್ತವೆ.

ಛಂದಸ್ಸಿನಲ್ಲಿ ಇಂದು ಅದ್ಭುತ ಮಾರ್ಪಾಟುಗಳಾಗಿವೆ. ಈ ಕೃತಿಯ ಮುಖ್ಯ ಛಂದಸ್ಸೆಂದರೆ ಕಾವ್ಯಗುರು, ಆಳ್ವಾರ ಮೊದಲಾದ ಕವನಗಳಲ್ಲಿ ಕಂಡುಬರುವ ವಿಧಾನ. ಇವುಗಳಲ್ಲಿಯ ಒಂದೊಂದು ಶ್ಲೋಕದಲ್ಲಿ ಆರು ಸಾಲುಗಳಿರುವದರಿಂದ ಇದನ್ನು ಷಟ್ಪದಿ ಎನ್ನಬಹುದು. ಆದರೆ ಈ ಷಟ್ಪದಿಯು ಒಮ್ಮೆ ಕುಸುಮವಾದರೆ ಒಮ್ಮೆ ಭೋಗವಾಗುತ್ತದೆ. ಅಲ್ಲದೆ ಮೂರು-ಆರನೆಯ

ಸಾಲುಗಳಲ್ಲಿ ಅಂತ್ಯ ಪ್ರಾಸದ ಜೋಡಣೆಯನ್ನು ಸ್ವೀಕರಿಸಿ ದ್ವಿತೀಯಾಕ್ಷರ ಪ್ರಾಸವನ್ನು ದುರ್ಲಕ್ಷಿಸಿದೆ. ಒಮ್ಮೊಮ್ಮೆ ಷಟ್ಪದಿಗಳ ಕೋಷ್ಟಕಗಳಲ್ಲಿ ಕಂಡುಬರದ ಷಣ್ಮಾತ್ರಾಗಣವೂ ಇಲ್ಲಿ ತಲೆ ಎತ್ತುತ್ತದೆ. ಶ್ಲೋಕದಲ್ಲಿಯ ಸಾಲುಗಳ ಸಂಖ್ಯೆ-ಸ್ವರೂಪಗಳ ಮಟ್ಟಿಗೆ ಇದನ್ನು ಷಟ್ಪದಿಯೆನ್ನಬಹುದು. ಗಣಗಳ ಮಟ್ಟಿಗೆ ಇದರ ರೀತಿ ಹೀಗೆ: ೧, ೨, ೪, ೫ನೆಯ ಸಾಲುಗಳಲ್ಲಿ ಎರಡು ಗಣ; ೩ ಹಾಗು ೬ನೆ ಸಾಲುಗಳಲ್ಲಿ ಮೂರು ಗಣ ಹಾಗು ಒಂದು ಗುರು. ಒಂದೊಂದು ಸಾಲಿನಲ್ಲಿಯ ಗಣಗಳು ೫ ಮಾತ್ರೆ ಇಲ್ಲವೆ ೬ಮಾತ್ರೆಗಳವಾಗ ಬಹುದು. ಆರು ಮಾತ್ರೆಗಳ ಒಂದು ಗಣವು ಒಮ್ಮೊಮ್ಮೆ ಮೂರು ಮಾತ್ರೆಗಳ ಎರಡು ಗಣಗಳಾಗಬಹುದು. ಭಾವದ ವಿವಿಧತೆಗೆ ಹೊಂದಿಕೊಂಡು ಈ ಛಂದಸ್ಸು ಮಾರ್ಪಡುತ್ತದೆ. ಈ ಮಾರ್ಪಾಟನಲ್ಲಿಯೂ ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಳ್ಳುತ್ತದೆ.

**ಸತ್ಯಾಗ್ರಹಿ, ಕ್ರಾಂತಿಕಾರ, ಹಿಂದೂ ಬಾರತೀಯ, ಕಂದ, ಬಾಳ ದೇಗುಲದಲ್ಲಿ, ಸಮತಾವಾದಿ** ಮೊದಲಾದ ಕವನಗಳಲ್ಲಿ ನವೀನ ಸಂಕೀರ್ಣ ಶ್ಲೋಕ ರಚನೆಯನ್ನು ಕಾಣಬಹುದು.

೭

ಈ ಕೃತಿಯ ತಿರುಳಿಗೆ ಇನ್ನೂ ಒಂದು ಪರಿಯಿದೆ. ಅದನ್ನು ಕುರಿತು ಕೆಲವು ಮಾತುಗಳನ್ನು ಹೇಳದೆ ಈ ಪೀಠಿಕೆಯು ಪೂರ್ಣವಾಗಲಾರದು. ಓರ್ವ ವ್ಯಕ್ತಿಯು ತಿಳಿಯಬೇಕಾಗಿದ್ದು— ಬಾಳನ್ನು. ಬಾಳ ದೇಗುಲದಲ್ಲಿ ಆಡಿ ಮಾತ್ರ ಅವನು ಬಾಳನ್ನು ತಿಳಿಯಬಲ್ಲನು. ಆದರೆ ಅವನು ತಿದ್ದಬೇಕಾಗಿದ್ದು ತನ್ನ ಬಾಳನ್ನು. ಓರ್ವ ವ್ಯಕ್ತಿಯ ಬಾಳಿನಲ್ಲಿ ಬಾಳಿನ ಅನಂತತೆಯೆಲ್ಲ ಮೂಡುವದೇ ಅದರ ಪೂರ್ಣತೆಯಾಗಿದೆ.

ಈ ಹಾದಿಯಲ್ಲಿ ಈ ಕೃತಿಯು ಒಂದು ದೃಷ್ಟಿ ಇಲ್ಲವೆ ದರ್ಶನವನ್ನು ವ್ಯಕ್ತಗೊಳಿಸುವದೆ? ಇದಕ್ಕೆ ಉತ್ತರವೆಂದರೆ–ಇಲ್ಲಿಯ ವಿವಿಧ ದರ್ಶನಗಳನ್ನು ಪವಣಿಸಿದ ಬಗೆಯೇ ಆ ದರ್ಶನವನ್ನು ನಿರೂಪಿಸುತ್ತದೆ.

**ದಾನಿ ಹಾಗು ಸಮತಾವಾದಿ, ಅನುಭಾವಿ ಹಾಗು ಸುಧಾರಕ, ಸತ್ಯಾಗ್ರಹಿ ಹಾಗು ರೂಪಾರಾಧಕ,**— ಇವೇ ಮೊದಲಾದವು ಪರಸ್ಪರ

ವಿರುದ್ಧವಾದ ಮಾದರಿಗಳಿರುವಾಗ ಇವುಗಳೊಳಗಿಂದ ಯಾವ ಸಮನ್ವಯ-ವನ್ನು ನಾವು ಹುಡುಕಿ ತೆಗೆಯುವದು ಸಾಧ್ಯವೆಂಬ ಸಂಶಯವು ಇಲ್ಲಿ ತಲೆ ಯೆತ್ತಬಹುದು. ಆದರೆ ಇಂಥ ಸಂಶಯವು ದೀರ್ಘಕಾಲ ಬಾಳಲಾರದು. ಪೂರ್ಣ ಜೀವನದ ಸಮಗ್ರತೆಯು ಬೆಳೆಯುವದು ಇಂಥ ಸಮನ್ವಯಗಳನ್ನು ಒಳಗೊಂಡಾಗ ಮಾತ್ರ. ಸುಖ, ದುಃಖ; ಸತ್, ಅಸತ್; ಕ್ಷರ, ಅಕ್ಷರ; ಈ ಎಲ್ಲ ದ್ವಂದ್ವಗಳ ಸಮನ್ವಯವಾಗುತ್ತ ನಡೆದಂತೆ ಜೀವನವು ಪೂರ್ಣತೆ-ಯೆಡೆಗೆ ಹಿಗ್ಗುತ್ತದೆ.

ಹೀಗೆ ನೋಡಿದಾಗ ಈ ಕೃತಿಯಲ್ಲಿ ಅಭಿವ್ಯಕ್ತಿಯನ್ನು ಪಡೆದ ತಾತ್ವಿಕ ದೃಷ್ಟಿಯು ವಿವಿಧ ಕೋನಗಳಲ್ಲಿ ವಿವಿಧವಾಗಿ ಕಂಡರೂ ಮೂಲತಃ ಒಂದೇ ಎಂಬುದು ಮನವರಿಕೆಯಾಗದಿರದು. ಈ ಎಲ್ಲದರಲ್ಲಿ ಮೂಲ ಆಸ್ತಿಯೆಂದರೆ ಪೂರ್ಣ ಜೀವನದ ಹಂಬಲ. ಇದು ಹೇಗೆ ಸಾಧ್ಯ? ವಿವಿಧ ಆವರಣಗಳಲ್ಲಿ ಇದನ್ನು ಪೋಷಿಸುವ ಬಗೆ ಯಾವುದು?

ವಾಡಿಕೆಯಾಗಿ ಮೊದಲು ವ್ಯಕ್ತಿಯನ್ನು ಆವರಿಸಿ ನಿಲ್ಲುವ ಆವರಣ ವೆಂದರೆ— ಸಂಸಾರ, ಕೌಟುಂಬಿಕ ಜೀವನ. ಸಂಸಾರವನ್ನು ಹೇಗೆ ರೂಪಿಸಿ ದರೆ ಪೂರ್ಣ ಜೀವನದ ವಿಕಸನಕ್ಕೆ ಅದು ಹೊಂದಿಕೊಳ್ಳಬಹುದು? **ಮಗು, ಕುಮಾರಿ, ಪತಿ, ಅನ್ಯಾನುರಕ್ತ ಪತಿ, ತಾಯಿ, ತಂದೆ,** ಇವೇ ಮೊದಲಾದ ಕವನಗಳಲ್ಲಿ ಈ ಪೂರ್ಣ ದೃಷ್ಟಿಯು ಸಂಸಾರದ ವಿವಿಧ ಸ್ಥಲಗಳಲ್ಲಿ ಎಂತಹ ಪುನರ್ನಿರ್ಮಾಣವು ಅವಶ್ಯ ಹಾಗು ಸಾಧ್ಯ ಎಂಬುದನ್ನು ತೋರಿಸುತ್ತದೆ.

ಸಂಸಾರದ ತರುವಾಯ ಸಮಾಜ. ವ್ಯಕ್ತಿಯು ಒಂದು ಮನೆ ಕಟ್ಟಿ ಬಾಳುತ್ತಾನೆ. ಆದರೆ ಇಂಥ ನೂರಾರು ಮನೆಗಳು ಕೂಡಿ ಒಂದು ಸಮಾಜ ವಾಗುತ್ತದೆ. ಇಂಥ ನೂರಾರು ಸಮಾಜಗಳ ಕೂಟವೇ ಒಂದು ದೇಶ. ದೇಶಗಳ ಕೂಟವೇ ಜಗತ್ತು. ಅರ್ಥಶಾಸ್ತ್ರ ಹಾಗು ರಾಜನೀತಿ ಶಾಸ್ತ್ರಗಳ ಮೂಲವೇ ಈ ನೆರೆಹೊರೆಯ ಆವಶ್ಯಕತೆಯಲ್ಲಿದೆ. ಹಾಗಾದರೆ ಪೂರ್ಣಜೀವನದ ಅವತಾರಕ್ಕೆ ಅನುಕೂಲವಾಗಿ ಸಮಾಜವು ಹೇಗೆ ಮಾರ್ಪಡಬೇಕು? **ತ್ಯಾಗಿ, ದಾನಿ, ಸದಸ್ಯ, ಸಮತಾವಾದಿ, ಕ್ರಾಂತಿಕಾರ, ಕಸ್ಮಾಡಿಗ—** ಇವೇ ಮೊದಲಾದ ಕವನಗಳು ಇದನ್ನು ತೋರಿಸುತ್ತವೆ. ದಾನಿಯು ಪಡೆದಷ್ಟನಾದರೆ ಸಮತಾವಾದಿಯು ದುಡಿದಷ್ಟು; ಅಂದ ಮೇಲೆ

ಪರಸ್ಪರ ವಿರೋಧೀ ವೃತ್ತಿಗಳ ಸಮನ್ವಯ ಹೇಗೆ ಸಾಧ್ಯವೆಂಬ ಪ್ರಶ್ನೆಯೇ ಏಳುವದಿಲ್ಲ. ಕವಿಯ ದೃಷ್ಟಿಯಲ್ಲಿ,— ಪಡೆದಪ್ಪನು ದಾನಿಯಂತಿರಬೇಕು. ದುಡಿದಪ್ಪನು ಸಮತಾವಾದಿಯಾದರೆ ಕವನದಲ್ಲಿಯ ಸಮತಾವಾದಿಯಂತಿರ ಬೇಕು. ದಾನ, ಪ್ರಜಾಪ್ರಭುತ್ವ, ಸಮತಾವಾದ, ರಾಷ್ಟ್ರಾಭಿಮಾನ, ಪ್ರಾಂತೀ ಯತೆ,—ಇವೆಲ್ಲವೂ ತಮ್ಮ ತಮ್ಮ ಕಾಲ-ಸ್ಥಾನಗಳ ಮಾನದಿಂದ ಕಲ್ಯಾಣ ವನ್ನೇ ಸಾಧಿಸುತ್ತವೆ. ಇಲ್ಲಿ ಬೇಕಾಗಿದ್ದು ಔಚಿತ್ಯ. ಮಾನವನ ಪ್ರಯತ್ನದ ಸೀಮೆಯನ್ನು ಮೀರಿ ವಿಶ್ವಶಕ್ತಿಯೂ ತನ್ನ ರೀತಿಯಲ್ಲಿ ಮಾರ್ಪಾಟನ್ನು ತರುತ್ತಿರುತ್ತದೆ. ಅದರ ಸಾಧನೆಗಳಲ್ಲಿ ಕ್ರಾಂತಿಯೂ ಒಂದಾಗಿದೆ. ವಿಶ್ವ ಶಕ್ತಿಯ ಕೈಬುಟ್ಟಿಯಿಂದಲೇ ಬರುವದರಿಂದ ಕ್ರಾಂತಿಯೂ ಸಹ ಸ್ವಾಗತಾರ್ಹ. ಹೀಗೆ ತನ್ನ ಗೆಯ್ಮೆಯಲ್ಲಿ ಪ್ರಾಮಾಣಿಕತೆ-ಔಚಿತ್ಯಗಳನ್ನೂ, ವಿಶ್ವಶಕ್ತಿಯ ಗೆಯ್ಮೆಯ ವಿಷಯದಲ್ಲಿ ಜ್ಞಾನ-ಸಮಾಧಾನಗಳನ್ನೂ ಇಟ್ಟುಕೊಂಡಿರುವದೇ ವ್ಯಕ್ತಿಯು ಸಮಾಜದಲ್ಲಿ ಮಾಡಬೇಕಾದ ಕಾರ್ಯವಾಗಿದೆ. ಈ ಕಾರ್ಯದ ಹೊಳವಿನಲ್ಲಿ ಯಾವ ಸಂಕುಚಿತ ದೃಷ್ಟಿಗೂ ಇಲ್ಲವೆ ವಾದಕ್ಕೂ ಪೂರ್ಣ ಜೀವನವು ಅಂಟಿಕೊಳ್ಳಲಾರದು. ದಾನಿ, ಸದಸ್ಯ, ಸಮತಾವಾದಿ, ಕ್ರಾಂತಿಕಾರ, ಕನ್ನಡಿಗ,— ಇವರೇ ಮೊದಲಾದವರಿಂದ ವ್ಯಕ್ತವಾಗಿಯೋ ಅವ್ಯಕ್ತವಾಗಿಯೋ ಪೂರ್ಣ ಜೀವನದ ವಿಕಸನವೇ ಮುಂದುವರಿದಿರುತ್ತದೆ. ಸನಾತನಿಯೂ ವಿನೂತನಿಯೂ ಕೂಡಿಯೇ ಅದರ ಕೃಷಿಯನ್ನು ಸಾಗಿಸಿರುತ್ತಾರೆ.

ಹೀಗೆ ಈ ಎರಡು ಆವರಣಗಳಿಗೆ ಹೊಂದಿಕೊಂಡು, ಅವುಗಳನ್ನು ಹೊಂದಿಸಿಕೊಂಡು, ವ್ಯಕ್ತಿಯು ನಿಂತ ಮೇಲೆ ಅವನು ಮಾಡಬೇಕಾದುದೇನು? ಕರ್ಮ, ಜ್ಞಾನ, ಭಕ್ತಿ, ಈ ಮೂರು ಮಾರ್ಗಗಳು ಬುನಾದಿಕಾಲದಿಂದ ಮಾನವನ ಆಸ್ತಿಯಾಗಿವೆ. ಗೀತೆಯಲ್ಲಿ ಈ ಮಾರ್ಗತ್ರಯದ ಸಮನ್ವಯ ಇದೆ. ಶ್ರೀ ಅರವಿಂದರು ಇಂದಿನ ಯುಗಕ್ಕೆ ಹೊಂದಿಸಿ ಈ ಸಮನ್ವಯವನ್ನೇ ವಿಶಾಲತರವಾದ ಅರ್ಥದಲ್ಲಿ ಅರಳಿಸಿ ತೋರಿಸಿದ್ದಾರೆ. ವ್ಯಕ್ತಿಯು ತನ್ನ ಬುದ್ಧಿ-ಸಂಸ್ಕಾರಗಳಿಗೆ ಒಗ್ಗಿದ ಹಾದಿಯಲ್ಲಿ ಮಾತ್ರ ಬೆಳೆಯಬಲ್ಲ. ಈ ದೃಷ್ಟಿಯಿಂದ ಬೇರೆ ಬೇರೆ ಮಜಲುಗಳಲ್ಲಿ ಕರ್ಮ, ಜ್ಞಾನ, ಸೌಂದರ್ಯ, ಅನುಭಾವ, ಇವು ವ್ಯಕ್ತಿಯನ್ನು ಹೇಗೆ ಅರಳಿಸಬಲ್ಲವೆಂಬುದನ್ನು **ಸತ್ಯಾಗ್ರಹಿ, ಕರ್ಮಯೋಗಿ, ವಿಜ್ಞಾನಿ, ಜ್ಞಾನಿ, ಧಾರ್ಮಿಕ ಕಲೋಪಾಸಕ, ಕಾವ್ಯಗುರು, ರೂಪಾ**

ರಾಧಿಕ, ಅನುಭಾವಿ, ನಿರ್ಲಿಪ್ತ, ಇವೇ ಮೊದಲಾದ ಕವನಗಳಲ್ಲಿ ತೋರಿಸಿದೆ.

ಜ್ಞಾನಿ, ಆಳ್ವಾರ, ಮುಕ್ತಜೀವಿಗಳು, ಈ ಕವನಗಳಲ್ಲಿ ಪೂರ್ಣ ಜೀವನದ ಹೊಳವು ಮೂಡಿದೆ. ಕರ್ಮ, ಜ್ಞಾನ, ಸೌಂದರ್ಯ, ಅನುಭಾವಗಳ ಸಮನ್ವಯವಿಲ್ಲದೆ ಪೂರ್ಣ ಜೀವನವಿಲ್ಲ. ಪರಸ್ಪರ ಪೂರಕಗಳಾದ ಮಾರ್ಗಗಳು ಇವು.

ಅಂತೂ ಶಿಶುವಿನಿಂದ ಮುಕ್ತಜೀವಿಯ ವರೆಗೆ ಅನಂತವಾಗಿ ಸ್ಫುರಿಸುವ ಬಾಳಿನ ಪವಾಡಗಳಲ್ಲಿ ಕೆಲವನ್ನು ಇಲ್ಲಿ ಬಾಳಿನ ವಿವಿಧ ಮಜಲುಗಳೂ ಪ್ರಕಾರಗಳೂ ಮನದಟ್ಟಾಗುವಂತೆ ಚಿತ್ರಿಸಲು ಯತ್ನಿಸಿದೆ. ಇಂದಿನ ಯುಗದ ಆವರಣಗಳಲ್ಲಿಯೇ ಈ ಮಜಲು-ಪ್ರಕಾರಗಳು ಇಲ್ಲಿ ದೃಗ್ಗೋಚರವಾಗಿವೆ.

೮

ಇದು ಕೃತಿಯ ರಚನೆಯ ನಂತರ ಬಂದ ವಿವರಣೆಯೆಂಬುದನ್ನು ಓದುಗರು ಲಕ್ಷ್ಯದಲ್ಲಿಡಬೇಕೆಂದು ಬಿನ್ನವಿಸುತ್ತೇನೆ. ಮನಸ್ಸಿನಲ್ಲಿ ಇದನ್ನೆಲ್ಲ ಎಣಿಕೆ ಹಾಕಿದ ಮೇಲೆ ಈ ಕೃತಿಯು ಜನ್ಮವೆತ್ತಿಲ್ಲ. ಅದು ಹುಟ್ಟಿದ ಮೇಲೆ, ಇದಕ್ಕೆ ಏನೆಂದು ಹೆಸರಿಡಬೇಕು? ಇದರ ಜಾತಕವೇನು? ಇದರ ಫಲಜ್ಯೋತಿಷವನ್ನು ತಿಳಿಯಲು ಜಾತಕದಲ್ಲಿಯ ಯಾವ ಯೋಗಗಳು ಸಹಾಯಕಾರಿಯಾಗುತ್ತವೆ? ಕೃತಿಗೆ ಜನ್ಮವಿತ್ತ, ಕವಿಯು— ವಿಶೇಷತಃ ಆ ಕೃತಿಯು ಸಾಮಾನ್ಯವಾಗಿ ಅಪರಿಚಿತವಾದ ಲಕ್ಷಣಗಳನ್ನೊಳಗೊಂಡ ಮಗುವಾಗಿದ್ದರೆ— ಇವೇ ಮೊದಲಾದ ಪ್ರಶ್ನೆಗಳನ್ನು ವಿವರಿಸುವ ಹೊಣೆಯನ್ನೂ ಹೊರಬೇಕಾಗುತ್ತದೆ. ಈ ಹೊಣೆಯ ಅರಿವಿದ್ದ ಮೂಲಕ ಈ ಪೀಠಿಕೆಯನ್ನು ನಾನು ಬರೆದಿದ್ದೇನೆ.

ನಾಡಿನ ಇಂದಿನ ಸ್ಥಿತಿಯಲ್ಲಿ ಕವಿಯು ಹೊರುವ ಹೊಣೆಯು ಇದೊಂದೇ ಅಲ್ಲ. ಅವನು ತನ್ನ ಕೃತಿಯ ಪ್ರಕಾಶಕನಾಗಬೇಕು; ಒಂದು ವೇಳೆ ಮುದ್ರಕನೂ ಆಗಬೇಕು.

ವೀಸನಗರ
೨೦-೭-೧೯೪೭

—ವಿನಾಯಕ

ಮ. ಮಾ.

ಈ ಪೀಠಿಕೆಯನ್ನು ಬರೆದು ಐದು ವರ್ಷಗಳಾದವು. ಇದೀಗ ಶ್ರೀ. ಜಿ. ಬಿ. ಜೋಶಿಯವರು ಈ ಕವನಮಾಲೆಯನ್ನು ಪ್ರಸಿದ್ಧಿಸಲು ಮುಂದೆ ಬಂದಿದ್ದಾರೆ. ಅವರಿಗೆ ನಾನು ತುಂಬ ಕೃತಜ್ಞನಾಗಿದ್ದೇನೆ.

ಆಂತರಿಕ ವಸ್ತುವನ್ನು ಆಯ್ದುಕೊಂಡ ಮಹಾಕಾವ್ಯ '**ದಿ. ಪ್ರೆಲ್ಯೂಡ್**' ಹಾಗು '**ಹೈಪೀರಿಯನ್**'ದಲ್ಲಿ ಚಿಗುರಿತೆಂದು ಹಿಂದೆ ಬರೆದಿದ್ದೆ. ಶ್ರೀ ಅರವಿಂದರ **ಸಾವಿತ್ರಿಯನ್ನು** ಓದಿದವರಿಗೆ ಈ ಕಾವ್ಯಪ್ರಕಾರವು **ಸಾವಿತ್ರಿಯಲ್ಲಿ** ಪೂರ್ಣ ವಿಕಾಸವನ್ನು ಹೊಂದಿದೆಯೆಂದು ಹೊಳೆಯದಿರದು. ಮಹಾಕಾವ್ಯದ ಈ ಅವಸ್ಥಾಂತರವೇ ಬರಲಿರುವ ಯುಗದ ಲಕ್ಷಣವೆಂದು ಕಾಣುತ್ತದೆ.

ಈ ಕೃತಿಯ ಕರಡುಪ್ರತಿಯನ್ನು ತಿದ್ದಿದ ನನ್ನ ಮಿತ್ರರಾದ ಶ್ರೀ. ಎಸ್. ಆರ್. ಮಳಗಿ ಹಾಗು ಶ್ರೀ. ಕೆ. ಡಿ. ಕುರ್ತಕೋಟಿಯವರಿಗೆ ನಾನು ತುಂಬ ಕೃತಜ್ಞನಾಗಿದ್ದೇನೆ.

ಕರ್ನಾಟಕ ಕಾಲೇಜು
ಧಾರವಾಡ
೨೧-೫-೧೯೫೬

—ವಿನಾಯಕ

## ಪ್ರಕಾಶಕನ ಮಾತು   

ಮೊಟ್ಟಮೊದಲ ಸಲ ಗ್ರಂಥರೂಪದಲ್ಲಿ ಬೆಳಕು ಕಾಣುತ್ತಿರುವ "**ಬಾಳದೇಗುಲದಲ್ಲಿ**" ಎಂಬ ಈ ಕವನಮಾಲೆಯನ್ನು ಮನೋಹರ ಗ್ರಂಥ ಮಾಲೆಯಲ್ಲಿ ಬಿಡಿಮುತ್ತಾಗಿ ಪ್ರಕಟಿಸಲು ಅನುಮತಿ ಕೊಟ್ಟುದಕ್ಕಾಗಿ ಶ್ರೀ. **ವಿನಾಯಕ** (ವಿ. ಕೃ. ಗೋಕಾಕ) ಅವರಿಗೆ ನಾನು ಅತ್ಯಂತ ಕೃತಜ್ಞ ನಾಗಿದ್ದೇನೆ.

ಈ ಗ್ರಂಥಪ್ರಕಟನೆಯಲ್ಲಿ ನನಗೆ ಹಲವಾರು ಸಲಹೆಗಳನ್ನಿತ್ತು ಇದರ ಸೌಂದರ್ಯವನ್ನು ಹೆಚ್ಚಿಸಲು ನೆರವಾದ ನನ್ನ ಗೆಳೆಯರಾದ ಶ್ರೀ ವಿ. ಯ. ಜತಾರ ಅವರಿಗೂ, ಮುದ್ರಣದಲ್ಲಿ ಸಕಲ ರೀತಿಯ ಸಹಾಯ ಒದಗಿಸಿ ಬೇಗನೆ ಮುದ್ರಿಸಿಕೊಟ್ಟ ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್‌ದ ಸಂಚಾಲಕರಾದ ಮತ್ತು ನನ್ನ ಮಿತ್ರರಾದ ಶ್ರೀ. ಕೆ. ಜಿ. ಜತಾರ, ಶ್ರೀ. ಎ. ಎಸ್. ಜತಾರ ಬಂಧುಗಳಿಗೂ ನಾನು ತುಂಬ ಉಪಕೃತನಾಗಿದ್ದೇನೆ.

ಗ್ರಂಥಕರ್ತರ ತ್ರಿವರ್ಣಚಿತ್ರವನ್ನು ಈ ಗ್ರಂಥದಲ್ಲಿ ಪ್ರಕಟಿಸಲು ಅನುಮತಿಯಿತ್ತ ಸುಪ್ರಸಿದ್ಧ ಚಿತ್ರಕಾರರಾದ ಕೊಲ್ಹಾಪುರದ ಶ್ರೀ. ರೇಗೆ ಯವರಿಗೂ ನಾನು ಕೃತಜ್ಞನಾಗಿದ್ದೇನೆ.

— ——

# ಶ್ರೀ. ವಿ. ಕೃ. ಗೋಕಾಕ ಅವರ ಗ್ರಂಥಗಳು

## ಕಾವ್ಯ

೧ ಪಯಣ
೨ ಸಮುದ್ರಗೀತಗಳು
೩ ಕಲೋಪಾಸಕ
೪ ಆಕಾಶಗಂಗೆ
೫ ಅಭ್ಯುದಯ
೬ ಹಿಗ್ಗು
೭ ನವ್ಯಕವಿತೆಗಳು
೮ ಬಾಳದೇಗುಲದಲ್ಲಿ

## ನಾಟಕ

೧ ಜನನಾಯಕ
೨ ವಿಮರ್ಶಕ ವೈದ್ಯ
೩ ಯುಗಾಂತರ

## ಪ್ರಬಂಧಗದ್ಯ

೧ ಚೆಲುವಿನ ನಿಲುವು
೨ ಸಮುದ್ರದಾಚೆಯಿಂದ
೩ ಜೀವನಪಾಠಗಳು
೪ ಇಂದಿನ ಕರ್ನಾಟಕ (ಉಳಿದವರೊಡನೆ)

## ವಿಮರ್ಶೆ

೧ ಸಾಹಿತ್ಯದಲ್ಲಿ ಪ್ರಗತಿ
೨ ಇಂದಿನ ಕನ್ನಡ ಕಾವ್ಯದ ಗೊತ್ತುಗುರಿಗಳು

## ಕಾದಂಬರಿ

೧ ಸಮರಸವೇ ಜೀವನ

## ಆಂಗ್ಲ ಭಾಷೆಯಲ್ಲಿ

೧ The Song of Life. . ( *Hind Kitabs* )
೨ The Poetic Approach to Language
( *Oxford University Press* )

# ಪರಿವಿಡಿ

ಬಾಳ ದೇಗುಲದಲ್ಲಿ ಅಡಿಯಿಡುವ ಎಳೆಯನಿಗೆ — 

ರತ್ನಾಕರಾಧೀಶ್ವರನು ಬೆರಳಿನಲ್ಲಿಟ್ಟ
ಬಾಳ ಹರಳಿನ ಚೆಲುವ ತಿಳಿದೆಯೇನು ?
ಇಣಿಕಿ ನೋಡಲು ಕುಣಿವ ಬಗೆಬಗೆಯ ಬಣ್ಣಗಳ
ಇಂದ್ರಜಾಲವನೆಲ್ಲ ಅಳೆದೆಯೇನು ?
ಅವರನಂತತೆಯ ಚಿಂತನದಲಿಹ ಮಣಿಗಾರ,
ಉಪಲದೀಕ್ಷಿತ, ರತ್ನರಸಿಕನಾಗಿ
ನೀ ಬಾಳುವದು, ಕಂದ ! ಜ್ಯೋತಿ-ಜ್ಯೋತಿಷಿಯಾಗಿ,
ಎಣೆಯಿರದ ಮಾಣಿಕ್ಯಮೂರ್ತಿಯಾಗಿ !

ತೇರೇರಿ ಬಂದಿರಲು ಮುಂಗಾರು, ಬಾಳಿನಾ
ಮುನ್ನೀರಿನಾಳದಲಿ ಸುಪ್ಪಾಣಿ-ಮುತ್ತು
ಇರುವವೆನಿತೆನಿತೊ ತಳತಳಿಸಿ ! ಮುಂಗಾಣದಲೆ
ಹಳಹಳಿಸುತಿರಲು ನಿನಗೇನು ಗೊತ್ತು ?
ಆಗಿನ್ನು ! ಅಣಿಯಾಗು ! ಕುಂಗರುತ್ತಂಕನಿರು !
ನೀರ ನೆಲೆಗಾಣ್ವ ಹಂಬಲಿಕೆಯಿರಲಿ !
ತೋರ್ಮುತ್ತುಗಳ ಮನನ, ನೀರ್ಮುತ್ತುಗಳನುದಿನ
ಪವಣಿಸುವ ಹವಣಿಕೆಯು, ಹುಟ್ಟಿ ಬರಲಿ !

ಒಂದೆಂದರೊಂದಲ್ಲ, ನೂರೊಂದು : ಎಂಬುದನು
ಯಾವ ಗಣಿತಿಯು ತಿಳಿದನವನೆ, ಗಣಿತಿ !
ಒಂದಪರಿಮಿತವೆಂಬುದನು ಕಂಡವನೆ ಕಂಡ !
ಥಾಳೈಸುವದು ಅವನ ಪ್ರಾಣ-ಪ್ರಣತಿ !
ಚಿಕ್ಕೆಗಳನೆಣಿಸೇಳು ! ಒಂದೆ ಆಕಾಶದಲಿ
ಇರುವ ನಕ್ಷತ್ರದಕ್ಷೋಹಿಣಿಯ ಗುಣಿಸು !

ಒಂದೆ ಧಾರುಣಿಯಲಿಹ ಕಾಣ್ಕೆಗಳ ಸಂಗ್ರಹಿಸು !
ಇದರ ತಾಳಕೆ ನಿನ್ನ ಎದೆ-ಮನವ ಕುಣಿಸು !
ಎಲ್ಲ ಅವತಾರಗಳ ಸೊಲ್ಲ ನುಂಗಿತು ಮುಗಿಲು ;
ಮೆಯ್ಯ,—ನೆಲ ; ಮಾತುಗಳ,—ನಮ್ಮ ಮನವು.
ತಣಿದಿಲ್ಲ ನೆಲ-ಮುಗಿಲು-ಮನ, ಶರಣರೊಡನಿದ್ದ
ಜೀವಗಳು ಮಾತ್ರ ತಣಿದವು. ಇದರ ನೆನಹು
ಎಚ್ಚರಿಸಿರಲಿ ನಿನ್ನ. ಇನ್ನಿರಲಿ ಮನುಕುಲದ
ಆ ದಿವ್ಯ **ಅನುಭವವೆ** ನಿನ್ನ ಸ್ಫೂರ್ತಿ !
ಅವನಲ್ಲಿ ಅವನ ಜಾತಿಯೆ ಹೂತು ಮಾಗಿರಲು,—
ಮಾನವನ ಜೀವಮಾನಕೆ ಬಂತು ಪೂರ್ತಿ !

ನಂಬದಿರು ಒಂದೆ ಧರ್ಮವ, ಒಂದೆ ಮಾರ್ಗವನು !
ಇಂಬುಗೊಡದಿರು ಯಾವುದೊಂದೆ ಶ್ರುತಿಗೆ !
ಕಂಬನಿಯ ಮಿಡಿಯದಿರು ನನ್ನದೇನಿಲ್ಲೆಂದು :
ಇಂಥ ಹಮ್ಮೆಳೆಯುವದು ನಿನ್ನ ಚ್ಯುತಿಗೆ.
ತೆಕ್ಕೆಬೀಳಾಗಸಕೆ ! ಎಲ್ಲ ದರ್ಶನಗಳಿಗೆ
ನೆಲವೆ ಒರೆಗಲ್ಲೆಂಬ ಶ್ರದ್ಧೆ ಬರಲಿ !
ಬಯಲಾಗು ! ಮೂಲೆಗುಂಪಾಗದಿರು ! ಬಾನ್ನೆಲದ
ಹರಕೆಗಳು ಅಡಿ-ಮುಡಿಯ ಕಾಯುತಿರಲಿ !

---

# ಸಮರ್ಪಣೆ



ಸರಸತಿಯು ಕರುಣೆಯಿಂದೆನಗಿತ್ತ ಮುರಲಿಯನು ನುಡಿಸಿರಲು ರಾಗವಾಗಿ
ತುಳುಕಿರುವ ಗಾನದ ವಿತಾನದಲಿ ಮೂಡಿತ್ತು ನನ್ನಿರವು ಯೋಗವಾಗಿ.
ವಿಶ್ವಮೋಹಿನಿ ತೋರಿದಂಥ ಮಾಣಿಕ ಮುತ್ತುಗಳನು ಪರಿಕಿಸಲು ನಡೆದು
ಒರೆದು ನೋಡಿದೆ ನನ್ನ ತಿಳಿವೆಂಬ ಚಿನ್ನವನ್ನೆಸೆಯಲದು ಕಾಂತಿವಡೆದು.
ಶಿಶುವಿನೆಳೆನೋಟದಲ್ಲಿಂಬುಗೊಳ್ಳುತ ಕೊನೆಗೆ ಮುನಿವರರ ದೃಷ್ಟಿಯಲ್ಲಿ
ತುಂಬಿ ಹೊಳೆಯುತಿಹ ಸೆಳೆಮಿಂಚುಗಳನಾಡಿಸಿದೆ ನಿನ್ನಮೃತವೃಷ್ಟಿಯಲ್ಲಿ.
ಘನರ ಚಾರಣನೆಂದು ಲೇಖನಿಯ ಕೆಳಗಿಡಲು ನಿಜದಯಾಘನನ ಕಂಡೆ.
ಸಂಕ್ರಾಂತಿಪುರುಷರನು ಗೀತಿಸುತ ವಿರಮಿಸಲು ಕ್ರಾಂತಿದರ್ಶನವನುಂಡೆ.
ನಿನ್ನ ಆಶೀರ್ವಚನವಹುದೆನ್ನ ಜಿಂದಿಗೆಯು; ಜೀವಬಿಂದಿಗೆಯ ತುಂಬಿ,
ನಿಂದೆ ಶ್ರಮಣೋತ್ತಮನೆ ! ಬಂದು ಶ್ರಾವಣದಂತೆ. ನೀನೆನ್ನ ಕಣ್ಣಾಗೊಂಬಿ.

ಬಾಳ ದೇಗುಲದಲ್ಲಿ ಕೈ ಮುಗಿದು ನಿಂತಿದ್ದೆ ಇರವಿಗರಿವಾಗಲೆಂದು ;
ಕಂಡೆ ಮಾನವಕುಲವೆ ಕಡಲಿನಂತ್ಕೈತಂದುದನು ಬಾಳಿಗೆರಗಲೆಂದು.
ಜನನ-ಮರಣಕೆ ನೊಂದು ಸಂಸಾರವೊಡ್ಡಿರುವ ತಾಪತ್ರಯಗಳಿಗೆ ಬೆಂದು,
ಕುಲಕೆ ಕುಲವೇ ಮುಂದುಗಾಣದಲೆ ಮೊರೆಯಿಟ್ಟತಿದರಿಂದ ಮುಕ್ತಿಯೆಂದು ?
ದೇಗುಲದ ಪ್ರಾಕಾರವೆಮಗೆ ಹೊರತಾಗಿರಲು ದೈವತವ ಕಾಣ್ಬುದೆಂತು ?
ಉದರವು ಬಕಾಸುರನ ತೆರದಿ ಬಾಯ್ಬಿಡುತಿರಲು ಮಿಕ್ಕುದನು ನೆನೆವುದೆಂತು ?
ಕಂಡರೂ ಕಾಣದೊಲು ಸೋಗಿನಲಿ ಗುಂಗಿನಲಿ ಗರ್ಭಮಂದಿರದೊಳಿದ್ದು.
ಬಾಳ್ ಬರಳು ಹೊರಗಿಲ್ಲಿ. ಬುವಿಯ ವಿಪರೀತಗಳಿಗವಳ ಬರವೊಂದೆ ಮದ್ದು.
ಬಾಳಾದರೂ ಬರಲಿ; ನಾವಾದರೂ ನಿಲಲಿ ಬಾಳ ಬಿಳಿಗೊಡೆಯ ಕೆಳಗೆ;
ಬಾಳ ಹೃದಯದಲಾವು; ಇಲ್ಲ ಬಾಳಿರಲೆಮ್ಮ ಹೃತ್‌ಚಿತ್ತದೊಳಗೆ ಒಳಗೆ.

ಇಂತು ಪ್ರಾರ್ಥಿಸಿ ನಿಂತೆ ಲೋಕದಾರ್ತಸ್ವರವು ತುಂಬಿರಲು ಕರ್ಣಗಳನು.
ಆಗ ಜನಸಂದಣಿಯ ನಡುವೆ ಕಂಡೆನು ಸುಳಿಯುತಿಹ ವಿವಿಧ ವರ್ಣಗಳನು.

ಮಾದರಿಯ ಮಾನವರು ತಮ್ಮಾಟಗಳ ಹೂಡಿ ನಿಂತಿಹರು ಗುಡಿಯ ಮುಂದೆ;
ಅವರ ನಾಗಸ್ವರವ ನಲುಮೆಯಿಂದಾಲಿಸಲು ಕೋಟಿ ಮಾನವರು ಹಿಂದೆ.
ನಾವ್ ಬಳಿಗೆ ಸುಳಿದಂತೆ ಗರ್ಭಮಂದಿರದಲ್ಲಿ ಬೆಳಕು ಕಳೆಯೇರುತಿಹುದು.
ನಾವು ಶುಚಿಯಾದಂತೆ ಮಾಯೆ ಮರೆಯಾಗುತ್ತ ತಾಯ ಮೊಗ ತೋರುತಿಹುದು.
ಕಣ್ಣಿನಳವಿದ್ದಂತೆ ಮೂರುತಿಯ ಸುಳುವಿಹುದು; ಕಂಗಳಿರೆ ಭಿನ್ನ ಭಿನ್ನ
ದರ್ಶನವು ಭಿನ್ನವಿದೆ; ಭಿನ್ನವಿರಲೇನಂತೆ ? ಅವರವರಿಗದುವೆ ಚಿನ್ನ.
ಎಲ್ಲ ದರ್ಶನಗಳಾ ಸಾರಸಂಗ್ರಹವೆ ನಾನರ್ಚಿಸುವ ಸತ್ಯವೆಂದೆ.
ಈ ಯುಗದ, ಈ ಜಗದ ಕಾಣ್ಕೆಗಳ ಮೊಗಸಾಲೆ ಕವನ ಮಂದಿರವಿದೆಂದೆ.

ಮಗುವು ಬಂದಾಡಿತ್ತು ಗುಡಿಯ ಪ್ರಾಂಗಣದಲ್ಲಿ ಮುಗ್ಧನಯನಗಳ ತೆರೆದು;
ವಾತ್ಸಲ್ಯ-ಪ್ರಕೃತಿಯೈಸಿರಿಯಲ್ಲಿ ಮುಕ್ತಿಯನು ಕಂಡುಳಿದುದನ್ನು ತೊರೆದು.
ಕೈಗೆ ಬಳೆ ತೊಡಿಸುತ್ತ ಜೀವ ಬುದ್ಧಿಗಳನ್ನು ಸಂಕೋಲೆಯಿಂದ ಬಿಗಿದು,
ಬಾಳ್ವ ನರನಾಧಿಪತ್ಯವನಲ್ಲಗಳೆಯುವ ಕುಮಾರಿ ತಾ ಕರವ ಮುಗಿದು
ನುಡಿದಳೀ ಶತ್ರುಸಮ ಜಗದಲ್ಲಿ ಮಿತ್ರನಂತಾತ್ಮನುದಯಿಸಲು ಬೇಕು.
ಸ್ವಾತಂತ್ರ್ಯ ತಲೆದೋರಿ ಸಮತೆ ಸಕಲರಿಗಾಗಿ ಸ್ನೇಹ ಪಲ್ಲವಿಸಬೇಕು.
ಮದುವಣಿಗ ತನ್ನ ಕಾರ್ಯೋತ್ಸಾಹ, ಬುದ್ಧಿವೈಭವದ ಪ್ರೋತ್ಸಾಹಗಳನು.
ಬದಿಗಿರಿಸುವುದ ಕಂಡೆ ಕನ್ನೆಯೋರ್ವಳಿಗಿತ್ತು ತನ್ನ ಮನ-ಪ್ರಾಣಗಳನು.
ಮದುವೆಯಾ ಮಂಟಪವೆ ಬಾಳ ದೇಗುಲವೆಂದು ಮದುಮಗಳೆ ದೇವಿಯೆಂದು.
ಸದ್ಭಕ್ತನಿವ ಕಂಡ ಸವಿಗನಸನೊಂದು ಕ್ಷಣ ತಾನೆ ಸುಖಜೀವಿಯೆಂದು.

ಪತಿಯು ಸತಿಯೇ ದೈವವೆಂದು ನುಡಿದನು ತನ್ನೊಳತಿ ಮೋಹಿಸಿದ್ದ ರತಿಗೆ.
ತಾಯಿ ಕೇಳ್ವಳು : ತನ್ನ ತಾಯ್ತನವ ಕಾಣದಿಹ ಹೆಣ್ಣೀಳಿವಳಾವ ಗತಿಗೆ ?
ತಂದೆಯೆನುವನು: ತಾನು ಸಾಕಿ ಸಲುಹಿದ ಕುವರರೇಳಿಗೆಗೆ ತನ್ನ ಜೀವ
ಸವೆದು ಸಣ್ಣಾಗಿರಲು ಹೊಸ ಜಗವು ಬರಲೆಂದು ತಾಳ್ವುದೆಂದದರ ನೋವ.
ಕಾದಲನು ಪ್ರೀತಿಯಲಿ ಪರಮಾರ್ಥವನು ಕಾಣುತಳವಡಿಸಿ ಬದುಕನೆಲ್ಲ,
ಗತಿಸಿರಲು ಕಾದಲಳು, ಕಣ್ಗೆ ಕತ್ತಲೆಗವಿದು, ಶೂನ್ಯವಿರೆ ಭುವನವೆಲ್ಲ—,
ಕಣ್ಣೊಳಗಣ್ ತೆರೆದು ಬೇರೆ ಲೋಕವ ಕಂಡ:– ಜ್ಯೋತಿದೇಹಿಗಳ ಲೋಕ ;

ಅಲ್ಲಿ ಪ್ರಿಯತಮೆ ತಾನು ಸುಳಿದಾಡುವುದ ಕಂಡು, ಹಿಗ್ಗಿನಲಿ ಕಳೆಯೆ ಶೋಕ.
ಇಂತಿಹುದು ದಾಂಪತ್ಯದಾದರ್ಶ, ಸಂಸಾರದಲ್ಲಿ ದರ್ಶನದ ರೀತಿ;
ಇಂತಿಹುದು ಭೂತಳದೊಳೊಂದು ಮನೆಯನು ಹೂಡಿ ಮನದ ಮಡಿ
ಕಾಯ್ವ ನೀತಿ.

ಕನ್ನಡಿಗ ತಾನೆಂದ: ಕನ್ನಡದ ಜನಮನದಿ ಜಗವೆ ಪಡಿಮೂಡಬೇಕು;
ಬೆಳೆದೊಂದು ಸೀಮೆಯಲಿ ನಿಃಸೀಮದಾ ಸಸಿಯ ನಡಲಾವು ಹೆಣಗಬೇಕು.
ಆರ್ಯಮಾತೆಯ ಪುತ್ರನೆಂದ: ಭಾರತಕೆಂದು ತನ್ನಸುವು ಮೀಸಲೆಂದು.
ಕ್ರಾಂತಿಕಾರನು: ರಕ್ತ ಹೊಳೆಯಾಗಿ ಹರಿದಿರಲಿ ಶಾಂತಿ ಹೊರಸೂಸಲೆಂದು.
ತ್ಯಾಗಿಯೆಂದನು: ನಾವ್ ಅನಂತತೆಯನನುಭವಿಸಲೆಲ್ಲವನು ತ್ಯಜಿಸಬೇಕು.
ಜ್ಞಾನಿಯೆಂದನು: ದಾನವೇ ಜ್ಞಾನಕಿಹ ದಾರಿಯೆಂದದನು ಭಜಿಸಬೇಕು.
ನುಡಿದನು ಸದಸ್ಯ: ಜನಶಂಕರಿಯ ಯುಗದಲ್ಲಿ ಜನಿಸಿರುವ ವಿಷವ ನುಂಗಿ
ನಾವ್ ನೀಲಕಂಠರಿರೆ ಹೊರಹೊಮ್ಮುತೈತರುವದಮೃತ, ಭಯ-ಭೀತಿ ಹಿಂಗಿ.
ನುಡಿದ ಸಮತಾವಾದಿ: ವಿಷಮತೆಯ ಕಿತ್ತೊಗೆದು ಸರ್ವರು ಸಮಾನರೆಂದು
ಧ್ವಜವ ನಿಲ್ಲಿಸಿದೊಡನೆ ಗರ್ಭಮಂದಿರದಲ್ಲಿ ದೇವಿ ಮೊಗ ತೋರ್ವಳೆಂದು.
ಇಳೆಯ ಪಾದಾಕ್ರಾಂತವಾಗಿಸಲು ಪಣ ತೊಟ್ಟ ಅಸುರ ಕೈಯೂರಿ ನಿಂತು
ಸೋಲನೊಪ್ಪಿದ. ಬಾಳ ಹೊಂಚಿ ಭಿನ್ನವು. ಅವನ ಬಯಕೆ ಕಡೆಗಾಣ್ಬುದೆಂತು?
ಇಂತೀ ಸಮಾಜವನು ವಿಧವಿಧದಿ ಹದಗೊಳಿಸೆ, ಬಾಳ ಸುಭಗತೆಯ ಬೆಳಗಿ,
ಹವಣಿಸಿದರೀ ಸಾಹಸಿಗಳು ತಮ್ಮೊಲವಿನುಜ್ಜೀವನದ ಪಥದಿ ಪಳಗಿ.
ಸತ್ಯಾಗ್ರಹಿಯು ತಾನು ಋತದ ದಾರಿಯ ತುಳಿದು ಕಹಿಯೆ ಸಿಹಿಯಿರುವದೆಂದ.
ಕರ್ಮಯೋಗಿಯು ನುಡಿದ: ಕಣ್ಣೆದುರು ಬಂದುದಕೆ ಸಜ್ಜುಗೊಳುತಿಹುದೆ ಚೆಂದ.
ಕರ್ಮಕುಶಲರು ತಾವು ತಮತಮಗೆ ತಿಳಿದಂತೆ ಬಾಳನಳೆದಿರುವರಿಂತು;
ಸೀಳುದಾರಿಯ ನಡೆದು ರಹದಾರಿಯನು ಕೂಡಿ ದೇಗುಲಕೆ ಬಂದು ನಿಂತು.

ಹಿರಿಯರೊರೆದಿಹ ಕರ್ಮಕಾಂಡದಂತೆಯೆ ನಮ್ಮ ಬಾಳನಳವಡಿಸಬೇಕು:—
ಇಂತಾ ಸನಾತನಿ. ವಿನೂತನಿಯು ತಾನೆಂದ: ಈ ಹಳೆಯ ರಗಳೆ ಸಾಕು;
ಧರ್ಮ-ಮತವೆಲ್ಲ ಬುಡಮೇಲಾಗಿರಲು ಮುಂದೆ ಬೇರೆ ಯುಗದುದಯವಾಗಿ

ವ್ಯಕ್ತಿ ಕಂಗೊಳಿಸುವನು ವಿಶ್ವಮಂದಿರಕಿಟ್ಟ ಹಿರಿಯ ಹೊಂಗಳಸವಾಗಿ.
ಆದಿಶೇಷನ ಮೆಯ್ಯಿ ಜಗ; ಹೆಡೆಗಳೇ ವ್ಯಕ್ತಿ; ಹೆಡೆಯಲಿಹ ರತ್ನ,—ಬುದ್ಧಿ;
ನುಡಿದನು ಸುಧಾರಕನು: ಬುದ್ಧಿವೈಭವವೊಂದೆ ನಾವ್ ಪಡೆಯಲಿರುವ ಸಿದ್ಧಿ.
ಮಿಂಚಿನಾರತಿ ಎತ್ತಿ ವಿಜ್ಞಾನಿಯೆಂದ: ಈ ಪಂಚಭೂತಗಳ ಮಣಿಸಿ,
ಅಂಕಿತದಲಿಟ್ಟು ಸುಖದಿಂಗಿತವ ಬೀರುವೆನು ಮನುಕುಲವನೆಲ್ಲ ತಣಿಸಿ.
ಇಂತು ಜ್ಞಾನೋಪಾಸನೆಯಲಿ ಕಳೆಗೊಂಡವರು ತಾವ್ ಕಂಡ ಪ್ರಭೆಗೆ ಬಾಗಿ
ಅದರ ಕರುಣೆಯ ಕಿರಣದಲ್ಲಿ ಬಾಳನು ಕಾಣ್ಬುದೆಂದಿಹರು ಗುಡಿಗೆ ಹೋಗಿ.

ರಸಿಕನೆಂದನು: ಪ್ರೀತಿ–ನೀತಿ ಸಂಗಮಿಸುತ್ತ ಸೆಳೆಯುವವು ಹಿಗ್ಗಿನೆಡೆಗೆ.
ಚೆಲುವಿನಾರಾಧಕನು ನುಡಿದ: ಚೆಲುವೇ ನಮ್ಮ ದೈವತವು ಕಟ್ಟಕಡೆಗೆ.
ಕವಿಯೆಂದ: ಬಣ್ಣಬಣ್ಣಗಳಾಟವಾಡುತ್ತ ರಾಗಭೋಗದಲಿ ಸಿಲುಕಿ
ಧರೆಯ ವಿವಿಧತೆಯನ್ನು ಕಂಡ ಮೇಲಿರಬೇಕು ಶುಭ್ರ ಜ್ಯೋತಿಯನು ನಿಲುಕಿ.
ಆಟಗಾರನು ನುಡಿದ: ಬಾಳೆಂದರೇ ಲೀಲೆ; ಧಾರುಣಿಯೊಳಾಟವಾಡಿ
ರಂಗಸಾಲೆಯ ಹಿಂದಿನಿಂದ ಕರೆ ಬಂದಾಗ ಸರಿಯುವೆನು ಸಮಯ ನೋಡಿ.
ಪ್ರಮಥನೆಂದನು: ಬರುವ ಯುಗದ ನಾಯಕನಾಗಿ ಬಾಳನಾಹ್ವಾನಿಸುವೆನು;
ಅದರ ಬರವನು ಕಾಯುತಗ್ನಿಕುಂಡದ ಮೇಲೆ ನಿಂತಲ್ಲಿ ಧೇನಿಸುವೆನು.
ಸಾಕ್ಷಿತತ್ಪರ ತನ್ನ ಬಾಳನ್ನೆ ಹೋಮಿಸಿದ; ವಿಶ್ವಚೈತನ್ಯ ಆಡಿ
ಪ್ರಕಟವಾಗುವ ಬಗೆಯ ಕಾಣ್ಬುದೊಂದೇ ಮುಕ್ತಿಯೆಂದದಕೆ ಮನವ ನೀಡಿ.
ಕಾವ್ಯಗುರು ತಾನಿಲ್ಲಿ ಪಾರ್ಥಿವರ ಮರ್ತ್ಯತೆಗೆ ತೊಳಲಾಡಿ ಗಾಸಿಗೊಂಡು
ಧರೆಯನ್ನೆ ದಿವ್ಯ ಲೋಕವನಾಗಿಸುವದೆಂದು ಬಗೆದಿದ್ದ ಸ್ಫೂರ್ತಿಗೊಂಡು.
ಯೋಗಜೀವಿಯುದಾರಚರಿತನೊಡನುಡಿದಿದ್ದ: ತಪ ಕೊನೆವ ಕಾಲ ಬರಲು
ತಾಯಿ ಕಾಣುವಳೆಮಗೆ; ಆ ನಸುಕು ಹರಿವನಕ ಸಂಗೀತಿಸಿರಲಿ ಕೊರಲು.
ಇಂತು ರಸ–ಭಾವ–ಚಿಂತನದ ಪಂಥವ ಹಿಡಿದು ಮುಖ್ಯರುದ್ಘೋಷಿಸಿದರು;
ದೇಗುಲದ ದಾರಿಯಲಿ ಬೆಳಕುಹೊಳೆಯನು ಹರಿಸಿ ಜನಮನವ ತೋಷಿಸಿದರು.

ಅನುಭಾವಿಯೆಂದಿದ್ದ: ಲೋಕದೀ ಬಣ್ಣಗಳು ಬರಿ ನೀರು, ಮಂಜಿನಾಟ;
ಕುಂಡಲಿನಿ ಹೆಡೆಯೆತ್ತಲರಳಿ ನಿಲ್ಲುವ ಕಮಲದಾ ನೋಟವೊಂದೆ ನೋಟ.

ಕನಸಿಗನು, ತನ್ನಿಂದ್ರದೀವಿಗೆಯು ಕಳೆದಿರಲು, ನಿಂತಿದ್ದ ಮನದಿ ನೊಂದು;
ಬೇರೆ ಲೋಕದ ಬಿದ್ದಣಕೆ ಕರೆವ ದಿವ್ಯ ಪ್ರಭೆ ಮತ್ತೆಂದು ಬರುವದೆಂದು.
ದುಃಖಿಯೆಂದನು: ದುಃಖ-ಸುಖವ ಮೀರಿದ ಪಂಥವೇ ಕೊನೆಗೆ ಗೆಲುವ ಪಂಥ.
ನಿರ್ಲಿಪ್ತನೆಂದ: ಹಿಗ್ಗಹುದು ಓದಿನ ತಿರುಳು; ಸೃಷ್ಟಿಯೆ ಪ್ರಮಾಣಗ್ರಂಥ.
ಭಕ್ತನಾಲಾಪಿಸಿದ: ಭೌಮದಾರಾಧನೆಯೆ ಜೀವಿತದ ಸೂತ್ರವೆಂದು;
ಭೌಮವನ್ನರಿತು ಬೆರೆತೊಂದಾಗುವದಕೆಂದೆ ಮಾನವನ ಪಾತ್ರವೆಂದು.
ಅನುಭಾವ-ರಾಜಯೋಗದ ಪ್ರಜ್ಞೆಯಿರಲು ಲೋಕಾಲೋಕಗಳನು ಕುರಿತು
ಚಿಂತಿಸಿದರಿವರು ತಾವ್ ತಮತಮಗೆ ಹೊಳೆದಂತೆ ಬಾಳಿನೊಳತಿರುಳನರಿತು.

ಉರಿವ ಪಾಂಡಿತ್ಯದುಸುಬಿನ ಬಯಲಿನಲಿ ತಿರುಗಿ ಬಿನ್ನಣದ ನಂದನವನು
ಶೋಧಿಸಿದ ರೀತಿಯನು ವಿವರಿಸಿದನಾ ಜ್ಞಾನಿ ನೆನೆಸುತ್ತ ಚಿದ್ಘನವನು.
ಬರಿಯ ಪಾಮರನಾಗಿ ಜನಿಸಿ ಪಂಡಿತನಾಗಿ ನೋವನುರವಣಿಸಿಕೊಂಡು,
ಮರುಳರಾ ಮರುಳ್ಗಣಿತದಿಂದ ವಿಹ್ವಲನಾಗಿ ನೂರು ಸಲ ಬವಣೆಗೊಂಡು,—
ಬಾಳೆಲ್ಲ ಹಾಳೆಂದು ವಿಭ್ರಮಿಸಿದಾಳ್ವಾರ ಕೊನೆಗೊಮ್ಮೆ ಶರಣು ಹೋಗಿ,
ಗುರುವಿನಡಿಯನು ಕಂಡು ರಾಜಿಸಿದ ದೇಗುಲದ ದೇವಿಗಿಹ ಮುಕುಟವಾಗಿ.
ಮುಕ್ತಜೀವಿಗಳಿವರು, ಬಾಳ್ಮೊದಲ ಬಲ್ಲವರು, ಲೋಕಪಾಲಕರು ತಾವು.
ಅವರ ಪದಪದ್ಮಗಳ ನಂಬಿರುವ ಮಾನವನ ಮುಟ್ಟಬಹುದೆಂತು ನೋವು?
ಗರ್ಭಗುಡಿಯಲ್ಲಿಹುದು ದಿವ್ಯ ತೇಜಃಪಿಂಡ; ಅಮೃತಪ್ರಭೆಗಿರುವ ಹುಟ್ಟು;
ಎಲ್ಲ ಜೀವಿತದೆಲ್ಲ ಸಾರಸಂಗ್ರಹದೆಲ್ಲ ಶಕ್ತಿ-ಪ್ರತಿಭೆಗಳ ಗುಟ್ಟು.
ತುಂಬುಜೀವಿಗಳಿವರು ಸರ್ವಸ್ವವನು ನೀಡುತಮೃತಸನ್ನಿಧಿಯ ಕೂಡಿ,
ತುಂಬಿವಿಂಡಂತಲೆಯುತಿಹರು ಮೂಜಗದಿ ತುಂಬುರಗೀತಗಳನು ಹಾಡಿ.

ಇವರ ಪಙ್ಕ್ತಿಯಲಿ ನಿಲ್ಲಿಸುವಂಥ ಬಿನ್ನಾಣವೆನ್ನೆಂದಿಗೆನ್ನ ಸೊತ್ತು?
ಆ ಸುಪ್ರಭಾತ ಸುಳಿವನಕ ಘನರಡಿದಾವರೆಯ ಹಿರಿಮೆಯೊಂದೆ ಗೊತ್ತು.
ಸಂಸಾರಸಾರೋದಯದಿ ಬಾಳಿ ಸೊಗದಿಂದ ಮನಕೆ ಮಂಗಲವ ತಂದು,
ಪ್ರೀತಿ-ವಾತ್ಸಲ್ಯಗಳು ಸಂಗಮಿಸುತಿರಲೆನ್ನ ರಸಗಂಗೆಗಿರಲು ದುಂದು;
ಪ್ರಾಂತ-ದೇಶ-ವಿದೇಶ-ಖಂಡ-ಧಾರುಣಿಗೆಲ್ಲಖಂಡ ಕಲ್ಯಾಣವೆಂದು

ಕರ್ಮಕ್ಷೇತ್ರದಿ ನನ್ನ ದೇಹವನು ಸವೆಸಿರಲು, ಬೆಳೆಯುತಿರೆ ಜೀವಬಿಂದು;
ಜ್ಞಾನಸಿದ್ಧಿಯ ಹೊಂದಿ, ಸೃಷ್ಟಿಯದ್ಭುತಗಳನು, ಲೋಗರಾಚಾರಗಳನು
ಕೈಸೆಲ್ಲಿಯಾಗಿಸುತ, ಜೀವಾತ್ಮಗನುರೂಪವಾಗಿಸಿ ವಿಚಾರಗಳನು;
ಚೆಲುವಿನರ್ಚನೆ, ಹೃದಯಸಂಪತ್ತು, ಭಕ್ತಿಯಿಂದೆಲ್ಲ ಕೊರತೆಯನು ತುಂಬಿ,
ಬಾಳುತಿರೆ ಶರಣೆಂದು ಶರಣರಿತ್ತಿರುವಭಯಕರದ ಕರುಣೆಯನು ನಂಬಿ:—
ಹಣೆಗಣ್ಣು ಎವೆಯೆತ್ತಿ ವಿವಿಧ ವಿಸ್ತಾರದಾ ವಿಶ್ವಗಳ ನೋಡಬಹುದು;
ಶಿರವು ಸಾಸಿರದಳದ ಕಮಲವಾಗರಳುತ್ತ ಜ್ಞಾನರವಿ ಮೂಡಬಹುದು.

•

ಪ್ರಕೃತಿ ದೇವನಿಗಿತ್ತ ನಲ್ಗಾಣಿಕೆಯ ರತ್ನಹಾರದಾ ಸುಳಿವು ಹಿಡಿದು
ಶಬ್ದಸೃಷ್ಟಿಯಲೊಂದು ಹಾರವನು ಪವಣಿಸಿದೆ ಗುರುವಿಗೆನೆ ತೊದಲು ನುಡಿದು.
ಕಾಣದೊಡೆಯನಿಗೆಂದು ಕನಸುಮನಸಿನಲಿರದೆ ಕಟ್ಟಿರುವ ಕವನಗಳನು—
ನೊಂದು ಸೋತಿಹ ಜೀವ ತನ್ನ ದೇವಗೆ ಮೀಸಲೆಂದಿಟ್ಟ ಸುಮನಗಳನು-
ಸ್ವೀಕರಿಸಿ ಕೈ ಹಿಡಿದೆ, ಹೃದಯವೇದಿಕೆಯಲ್ಲಿ ಕುಳಿತಿರಲು ಜೀವಕನ್ನೆ
ಅಂಜುತಳುಕುತ ನಾಚುತೆದುರು ನೋಡುತ ನಲ್ಲನೈತರುವ ದಾರಿಯನ್ನೆ!
ಉಷೆಯಂತೆ ರೋಮಹರ್ಷಿತನಾದೆ ನೀ ಬಂದು ನಿಲ್ಲಲನಿರುದ್ಧನಂತೆ,
ಯಾವ ಯೋಗಾಯೋಗ ನಿನ್ನನೊದಗಿಸಿತೆಂದು ಬೆಸಗೊಳುತ ಮುಗ್ಧನಂತೆ.
ನನ್ನ ಪುಣ್ಯವೊ ನಿನ್ನ ಕಾರುಣ್ಯವೋ ತಿಳಿಯೆ. ಅಹುದು ಕಾರುಣ್ಯ, ಬಲ್ಲೆ!
ಇಲ್ಲದಿರೆ ನಿನ್ನ ಗುರುತಿಸಲಳವೆ? ನಿನ್ನನ್ನು ಕರೆಯುವುದು ನನ್ನ ಸೊಲ್ಲೆ?
ನಾಳನಾಳದಿ ನೆಲಿಸುತಂತರಂಗವ ಚಲಿಸು, ಗೆಲಿಸೆನ್ನ, ಪುಣ್ಯಪುರುಷ!
ನಿನ್ನಾಣತಿಯೆ ನನ್ನ ಗುರಿ; ದರ್ಶನವೆ ಸುಖವು; ನಿನ್ನ ಸನ್ನಿಧಿಯೆ ಹರುಷ.
ನಿನ್ನ ಪಂಚವಿರಾಟರೂಪವನು ತಿಳಿವಂಥ ಮಾಟ ನೋಟಕ್ಕೆ ಬರಲಿ;
ಕಿವಿಗೆ ದಿವ್ಯಾಮೋದಗಳ ನಾದ—ಸಾರಂಗಿ, ವೀಣಾ, ಮೃದಂಗ, ಮುರಲಿ.

— — — —

## ೧. ದೇಗುಲದ ದಾರಿಯಲ್ಲಿ   

ಎಲುಬಿನಾ ಹಂದರೋ
ಎಲುಬಿನಾ ಹಂದರ!
ಕಣ್ಣೀರಿನ ಬಂದರೋ
ಕಣ್ಣೀರಿನ ಬಂದರ!
ಬೆಮರುಹನಿಯ ಕಂದರ
ನೋಡೆ ನೀ ವಸುಂಧರಾ!
ಎಲುಬಿನಾ ಹಂದರಾ!

ಲಕ್ಷಾವಧಿ ಜನರದೇಕೆ
ಹೊಳಲ ಬಿಟ್ಟು ಬಂದರು?
ಮಕ್ಕಳು ಮರಿ ಹೆಣ್ಣು ಮಣ್ಣು-
ಗಡಿಗೆಗಳನು ತಂದರು?
ದವುಡು ಬಂತು ದಿಳ್ಳಿಗೆ.
ಜನವು ಬಂತು ಹಳ್ಳಿಗೆ.
ಹಳ್ಳಿಯಲ್ಲಿ ತಿನ್ನಲು
ಕೂಳೆ ಇಲ್ಲವೆನ್ನಲು
ಕೂಳಿಲ್ಲದೆ ಕೊಳೆವುದೇನು?
ಬಾಂಬು ತರಲು ಸಾವನು.
ಪಟ್ಟಣದಲಿ ಸುಟ್ಟುಕೊಂಡು
ಸಾಯ್ವುದೆ ಲೇಸೆನುವೆನು!
ಎಲುಬಿನಾ ಹಂದರೋ
ಎಲುಬಿನಾ ಹಂದರ!

ನಿಲ್ದಾಣೆಯಲಿ ನಿರಾಶ್ರಿತರು
ನಿಂತ ನಿಲುವ ನೋಡಿಯೂ

ಗಂಡು—ಹೆಣ್ಣು ಹಿರಿಯ—ಕಿರಿಯ-
ರೆಲ್ಲ ಸುತ್ತುಗೂಡಿಯೂ
ಇಲ್ಲ ಹಿಂದೆ ಇಲ್ಲ ಮುಂದೆ
ಇಲ್ಲ ತಾಯಿ ಇಲ್ಲ ತಂದೆ !
ನೆಲಗಡಲೆಯು ಹೊಟ್ಟೆಗೆ ;
ಶಯನ ರೈಲುಗಟ್ಟೆಗೆ.
ಕುಡಿಯಲು ಹಾಲಿರದ್ದ ಕೂಸು
ಕ್ರಂದಿಸಿ ಆಕ್ರಂದಿಸಿ
ಒರಲುತಿರಲು ನೋಡಲಾರೆ
ದೇವ ! ಎಂದೆ ವಂದಿಸಿ.
ಎಲುಬಿನಾ ಹಂದರೋ
ಎಲುಬಿನಾ ಹಂದರ !

ಬೇಡ ಚಿರಂಜೀವಿಪದವು
ಬೈಗು ಬೆಳಗು ಮೂಡಿಸಿ
ಕಾವ್ಯದಲ್ಲಿ ; ರಂಭೆಯರನು
ಕರೆದು ನಾಟ್ಯವಾಡಿಸಿ.
ಗಂಧರ್ವರ ಗಾನ ಪಾಪ
ಅಮೃತದುಣಿಸದೆಂಥ ಶಾಪ !
ಹೊನ್ನಿನ ಮಳೆ ಬೇಕದಿಂದು
ಜನಜಂಗುಳಿ ಕಾಯಲೆಂದು.
ಅಂಗೈಯಿದು ಅಕ್ಷಯುವಿರೆ
ತೆರೆದ ಬಾಯಿಗನ್ನವು
ಉದ್ಭವಿಸುವ ವರನ ಪಡೆಯೆ
ಕಳೆವುದೆನ್ನ ಬನ್ನವು.
ಎಲುಬಿನಾ ಹಂದರೋ
ಎಲುಬಿನಾ ಹಂದರ !

ಅಗ್ನಿರಥವೆ ಇವರ ಭಗ್ನ-
ಮನೋರಥವದಾಯಿತು
ಬಡವರಶ್ರುಧಾರೆಗೆ ಧರೆ
ಅಂದಮಾನವಾಯಿತು.
ಇವರು ಕುಳಿತ ರೈಲುಗಾಡಿ
ದಿಕ್ಕುಗಳನು ಮಿಕ್ಕುತೋಡಿ
ಮುಗಿಲಿನಾಚೆಗುರುಳಲಿ
ನಿರ್ವಯಲಿಗೆ ತೆರಳಲಿ !
ಬುವಿಯ ದುಃಖದಿಂದ ದೂರ-
ವಿಹುದೆ ಸ್ವರ್ಗಸುಖವೆನೆ
ದೇವನಾದ ನಿರುತ್ತರನು;
ಮುಚ್ಚಿಕೊಂಡ ಮುಖವನೆ !
ಎಲುಬಿನಾ ಹಂದರೋ
ಎಲುಬಿನಾ ಹಂದರ !

ಗಾಡಿ ಬೆಟ್ಟಬೆನಕವೆನಿಸಿ
ಸುತ್ತುವೀ ಧರಾಂಗನೆ
ನೋಡಬೇಕು ತಾ ಚವಂಗ-
ವೆಂತೊಗೆವಳೊ ಚಂಗನೆ '
ತಾರೆಗಳಾ ಚಕ್ರವ್ಯೂಹ-
ದಲ್ಲಿ ಮರೆತು ದೇಹ-ದಾಹ-
ಗಳನ್ನು, ಸುತ್ತುತಿರುವಳು.
ಕೈಯನೆತ್ತುತಿರುವಳು.
ನಮ್ಮ ಕುಲಗಳಾಗುಹೋಗು
ಅವಳಾಟಕೆ ಜೋತಿವೆ.
ಅವಳ ಕಣ್ಣಾಲಿರುವ ಕಳೆಗೆ
ನಮ್ಮ ಹೃದಯ ಸೋತಿವೆ.

ಎಲುಬಿನಾ ಹಂದರೋ
ಎಲುಬಿನಾ ಹಂದರ !

.

ಮೂಜಗವನೆ ಮೂದಲಿಸುತ
ಮುನ್ನಡೆಯುವ ಯೋಧರು
ಗವಿಯ ಸೇರುತಿಂದ್ರಪದವಿ-
ಗಾಸೆಬಡುವ ಸಿದ್ಧರು,
ಜನರ ಕೊಲುವ ಕ್ರುದ್ಧರು,
ಹಿಂಸಿಸುವ ಪ್ರಬುದ್ಧರು,
ಆಗಲೆಳಸಿ ಬ್ರಹ್ಮಜ್ಞಾನಿ
ಕಾಳನಾದ ವಿಜ್ಞಾನಿ :—
ಇವರನಾಡಿಸುವಳದೆಂತು
ತಾಯಿ ನೋಡುವಂತಿದೆ:
ಇವರ ಹುಗಿವ ನೆಲದ ಮೇಲೆ
ಜನತೆಯಾಸೆ ನಿಂತಿದೆ.
ಎಲುಬಿನಾ ಹಂದರೋ ;
ಎಲುಬಿನಾ ಹಂದರಾ !

——

## ೨. ಬಾಳ ದೇಗುಲದಲ್ಲಿ   

ಬಾಳ ದೇಗುಲದಲ್ಲಿ
ಜೀತದಾಳೆಂದು
ಬಂದು ನಿಂತಿಹೆವಿಂದು
ನೀನೆ ಆಳ್ ಎಂದು.
ಓ ದೇವಿ ! ಮಾದೇವಿ !
ಕಂಣು ತೆರೆಯೆಂದು ;
ನಮ್ಮ ಪಾಪಗಳನ್ನು
ತೊಡೆದು ಪೊರೆಯೆಂದು.
ಉಳಿದ ದೇವರುಗಳೆ-
ಲ್ಲರು ದಿಂಡವೆಂದು
ಕಾಣುವದಿದೆಲ್ಲ ನಿನ್-
ನದೆ ಪಿಂಡವೆಂದು.
ನಿಂದ ಭಕ್ತರನಿನ್ನು ಕಣ್ದೆರೆದು ನೋಡು.
ಬಂದ ಯಾತ್ರಿಕರನ್ನು ಹರಸು, ಕಾಪಾಡು.

ದಶಾವತಾರಗಳೆಲ್ಲ
ನೀನೆ ತಾಯ್ ಎಂದು,
ಎಲ್ಲ ಕುಲಧರ್ಮಗಳು
ನೀನೆ ಕಾಯ್ ಎಂದು,
ಇಂದು ನೇಸರ ಚಿಕ್ಕೆ
ನೀ ಕರುಣೆಯೆಂದು,
ಅನುಭಾವಿ, ಕವಿ, ಜ್ಞಾನಿ—
ಚಿರತರುಣಿಯೆಂದು :

ಒಡನುಡಿದು ಬಾಳಿರಲು
ನಿನ್ನ ಪದತಲದಿ
ನಾವಿಂದು ನಿಂತಿಹೆವು
ನಿನ್ನ ಎಡಬಲದಿ.
ಓ ದೇವಿ! ಮಾದೇವಿ! ಕಣ್ದೆರೆದು ನೋಡು.
ನಿಂದ ಭಕ್ತರನಿನ್ನು ಹರಸು. ಕಾಪಾಡು.

ಧಾರುಣಿಯ ಹುಡಿಯಿಂದ
ಬಾನ್ ಹುಡೆಯ ವರೆಗೆ
ಸಾಗರದ ನಡುವಿಂದ
ಅದರ ಕೊನೆವರೆಗೆ
ಎಂಟು ದಿಗ್ದೆಸೆಯಿಂದ
ಧ್ರುವತಾರೆವರೆಗೆ
ನರ್ತಿಸುವ ಧರೆಯಿಂದ
ಶೂನ್ಯದಾ ಗೆರೆಗೆ:—
ನಾವು ಕಂಡಿಹುದೊಂದೆ:
ತಾಯ್: ನಿನ್ನನೊಂದೇ.
ನಾವರ್ಚಿಸಿಹುದೊಂದೆ:
ಬಾಳ್! ನಿನ್ನನೊಂದೇ.
ಓ ದೇವಿ! ಮಾದೇವಿ! ಕಣ್ದೆರೆದು ನೋಡು.
ಬಂದ ಯಾತ್ರಿಕರನ್ನು ಹರಸು. ಕಾಪಾಡು.

ಏಸುಕ್ರಿಸ್ತನು ನಿನ್ನ
ಬೆಸ್ತರವನಹುದು.
ಕೃಷ್ಣಯಾದವ ನಿನ್ನ ಬೇಡರವನಹುದು.
ರಾಮ ರಾಘವ ನಿನ್ನ
ಬಡಪಾಯಿಯಹುದು.

ಬುದ್ಧ ಗೌತುಮ ನಿನ್ನ
ಬೇಹಿನವನಹುದು.
ಬಂದು ಜನಿಸಿದರಿವರು
ನಿನ್ನುದರದಲ್ಲಿ
ಕಂಡು ಮುಕ್ತಿಯನಲ್ಲಿ,—
ಕಾಣ್ಬುದಿನ್ನೆಲ್ಲಿ ?
ಓ ದೇವಿ ! ಮಾದೇವಿ ! ಕಣ್ದೆರೆದು ನೋಡು.
ನಿಂದ ಯಾತ್ರಿಕರನ್ನು ಹರಸು. ಕಾಪಾಡು.

ಮಣ್ಣಿನಲಿ ಮೊಳೆಯುತ್ತ
ಕಣ್ಣಿನಲ್ಲರಳಿ
ದೇಹ ಮನದಲಿ ನರಳಿ
ಪ್ರಾಣದೆಡೆ ಹೊರಳಿ
ಬುದ್ಧಿಯಲಿ ಜೋತಾಡಿ
ನೇತಾಡಿ ಕೆರಳಿ
ಆತುಮನ ಜ್ಯೋತಿಯಲಿ
ನಿನ್ನೆಡೆಗೆ ಮರಳಿ
ನಿನ್ನ ಪದಪದ್ಮದಲಿ
ಬಾಳ್ವುದೆಂಬುವರು.
ಅಲ್ಲಿಂದ ಲೋಕವನೆ
ಆಳ್ವುದೆಂಬುವರು.
ಓ ದೇವಿ ! ಮಾದೇವಿ ! ಕಣ್ದೆರೆದು ನೋಡು.
ಬಂದ ಭಕ್ತರನಿನ್ನು ಹೆರಸು. ಕಾಪಾಡು.

ಕ್ರಿಮಿಕೀಟಕಂಗಳಲಿ
ಅಣುರೇಣೆನಲ್ಲಿ
ಧಾತುಲೋಹಂಗಳಲಿ

ತೃಣಕಾಷ್ಠದಲ್ಲಿ
ನರದೇಹಪಂಜರದಿ
ಮನಬುದ್ಧಿಯಲ್ಲಿ
ನೆಲಸಿರುವೆ, ನೀನಿರದ
ಸಮೃದ್ಧಿಯೆಲ್ಲಿ ?
ನೀನೆ ಸೌದಾಮಿನಿಯು,
ನೀನೆ ಮೋಹಿನಿಯು.
ಎಲ್ಲೆಡೆಗೆ ತುಂಬಿಹುದು
ನಿನ್ನ ವಾಹಿನಿಯು.
ಓ ದೇವಿ ! ಮಾದೇವಿ ! ಕಣ್ದೆರೆದು ನೋಡು.
ಬಂದ ಭಕ್ತರನಿನ್ನು ಹರಸು. ಕಾಪಾಡು

ಭೂಮಿಯಲಿ ಸುಖದುಃಖ
ಭೋಗಿಸಿದೆಯೆಂದು
ಗಂಧರ್ವಲೋಕದಲಿ
ರಾಗಿಸಿದೆಯೆಂದು
ದೇವಲೋಕದಿ ತಪವ
ಮಾಗಿಸಿದೆಯೆಂದು
ಮರಳಿ ಭೂ-ವೈಕುಂಠ-
ವಾಗಿಸುವಿಯೆಂದು
ನಿನ್ನ ಖ್ಯಾತಿಯ ಕೇಳಿ
ಬಳಿಗೆ ಬಂದಿಹೆವು
ಹಸುಳ ಜೀವವ ಕಾಣ್ಕೆ-
ಯೆಂದು ತಂದಿಹೆವು.
ಓ ದೇವಿ ! ಮಾದೇವಿ ! ಕಣ್ದೆರೆದು ನೋಡು.
ಬಂದ ಯಾತ್ರಿಕರನ್ನು ಹರಸು. ಕಾಪಾಡು.

ತುಂಬಿ ಬೆಸಲಾದ ಶೂ-
ನ್ಯದ ರಾಣಿ ನೀನು.
ಎಲ್ಲ ಕುಲವೆಲ್ಲ ಜಗ-
ಗಳ ಜನನಿ ನೀನು.
ಕಾಲಗೋಲಗಳುಸಿರು
ಸಿರಿ ವಾಣಿ ನೀನು
ಸಾವೆಂಬ ತೆರೆಮರೆಯ-
ಲಿಹ ಜಾಣಿ ನೀನು.
ನೀನೊಲಿದು ಕರುಣಿಸುವ
ವಿಶ್ವಚೇತನವು
ಪಟ್ಟ ಕಷ್ಟಕ್ಕಿಂತ
ಮಿಗಿಲು ವೇತನವು.
ಓ ದೇವಿ ! ಮಾದೇವಿ ! ಕಣ್ದೆರೆದು ನೋಡು.
ಬಂದ ಭಕ್ತರನಿನ್ನು ಹರಸು. ಕಾಪಾಡು.

ಪ್ರಾಣದರಗಿಳಿ ನುಡಿಸಿ
ಬಗೆಗೊಡೆಯ ಹಿಡಿದು
ರಾಗವಾಗಿಸಿ ಕೊರಲ
ವೀಣೆಯನು ಮಿಡಿದು
ಮಂಗಳಾರತಿಯೆತ್ತಿ
ಕಂಗಳಲಿ ತಡೆದು
ನಿನ್ನರ್ಚಕನ-ದೈವ-
ದಾಣತಿಯ ಪಡೆದು
ನಿಂತಿಹೆವು ನಾವಿದೊ ಉ-
ಧೋ ! ಉಧೋ ! ಎಂದು
ಸಾಲುದೀವಟಿಗರೆನೆ
ಮೂಲಕೈತಂದು:

ಓ ದೇವಿ ! ಮಾದೇವಿ ! ಕಣ್ದೆರೆದು ನೋಡು.
ಬಂದ ಕನಸಿಗರನ್ನು ಹರಸು. ಕಾಪಾಡು.

ಎಲ್ಲ ಶೋಧವು ಮುಗಿದು
ನಿನ್ನ ದೇಗುಲದಿ
ನೆರೆದಿಹುದು ಜನಜಾತ್ರೆ
ನಿನ್ನ ಬಾಗಿಲದಿ ;
ಪಾಪಪುಣ್ಯದ ಕಥೆಯ-
ದೆಂದು ಮನುಕುಲದಿ
ತೊಡೆದು ಹೋಗುವದೆಂದು
ತಡೆದು ವ್ಯಾಕುಲದಿ.
ನಿನ್ನ ದರುಶನಕೆಲ್ಲ
ಪಾಪ ಹರಿಯುವದು
ಪುಣ್ಯಸಂಚಯವೆಲ್ಲ
ಹಣ್ಣೆ ಬಿರಿಯುವದು.
ಓ ದೇವಿ ! ಮಾದೇವಿ ! ಕಣ್ದೆರೆದು ನೋಡು.
ಬಂದ ಯಾತ್ರಿಕರನ್ನು ಹರಸು. ಕಾಪಾಡು.

ಗರ್ಭಗುಡಿಯಲಿ ನಿನ್ನ
ಮೂರ್ತಿಯಿಹುದೆಂದು
ಹೊರಗಿಲ್ಲಿ ಬರಿ ನಿನ್ನ
ಕೀರ್ತಿಯಿಹುದೆಂದು
ಕಾಣದಾ ಸೊಬಗಿಂಗೆ
ನಾವ್ ಲುಬ್ಧರೆಂದು
ನಿನ್ನ ಕಾಣುವವರೆಗೆ
ನಾವ್ ಸ್ತಬ್ಧರೆಂದು

ನಿಂತಿಹೆವು. ತೆರೆಯಲಿ ಮ-
ಹಾದ್ವಾರ, ತಾಯೆ !
ಬೆಳಕು ಹೊಳೆಯಿಳಿದು ಸರಿ-
ಯಲಿ ನಿನ್ನ ಮಾಯೆ :

ಓ ದೇವಿ ! ಮಾದೇವಿ ! ಕಣ್ದೆರೆದು ನೋಡು.
ಬಂದ ಭಕ್ತರನಿನ್ನು ಹರಸು. ಕಾಪಾಡು.

---

## ೩. ಯಾತ್ರಿಕರು

ಬಾಳ ದೇಗುಲದಲ್ಲಿ
ಬಂದು ನಿಂದವರು;
ಹಡೆದ ಮಾತಾಯಿಯನು
ಕಾಂಬೆವೆಂದವರು:
ಒಬ್ಬೊಬ್ಬರಾಗಿಲ್ಲಿ
ಬರುತಿಹರು ನೋಡು.
ನಿನ್ನೆದೆಯ ಹೊಗಲಿವರ
ಕುರಿತೊರೆದ ಹಾಡು;
ಆದರ ಸಂಗೀತಕ್ಕೆ
ನಿನ್ನೊಲವು ತೆರೆದು
ಬಾಳಿರಲಿ ಕಾಮನೆಯ
ತೆರೆಮರೆಯ ತೊರೆದು.

# ೧. ಮಗು

೧

ನಿನ್ನೆ ಹಸುಳನಿದ್ದೆ. ಇಂದು
ಆಟಗೂಳಿ ಹುಡುಗನಾದೆ.
ಏನು ಬೇಕು ನಿನಗೆ ಹೇಳು
ಏನು ಬೇಕು, ಪಾಂಡು !
ಏನು ಬೇಕದೆಂದು ಕೇಳಿ
ವೇಳೆಕಳೆವುದೇಕೆ ? ಏನು
ಬೇಕೆಂಬುದು ನನಗೆ ಗೊತ್ತು.
ಬರಿಯ ಚಿಣೀ ದಾಂಡು !

ಬೇಕು ದ್ರಾಕ್ಷೆ, ಲೆಮನ್‌ಡ್ರಾಪು ;
ಬೇಕು ತಲೆಯ ಮೇಲೆ ಕ್ಯಾಪು ;
ಬೇಕು ಗೋಲಿ, ಬೇಕು ಗುಂಡು ;
ಬೇಕು ಚಿಣೀ ದಾಂಡು !
ತೊಟ್ಟಿಲಲ್ಲಿ ಮಲಗಿ ಬೆರಳ
ಚೀಪಿ ತಾಯ ಹಾಲೆ ಎಲ್ಲ
ಆಟ-ಊಟವಾದ ಕೂಸು
ನೀನೆ ಏನು, ಪಾಂಡು !

ನೀನು ಮೊದಲು ಚಿಕ್ಕೆಯನ್ನು
ಗುರುತಿಸುತ್ತ 'ಚಿಕ್ಕೆ' ಎಂದು
ತೊದಲು ನುಡಿದ ನೆನಪು ಚಿಕ್ಕೆ-
ಯಂತೆ ಮನದಿ, ಪಾಂಡು !
ಹೊಳೆಯುತಿಹುದು. ಮೋಡ, ಮುಗಿಲು,
ಹೂಗಳನ್ನು ಕಾಣುತೊಲಿದು

ನೋಟ ಮುಗಿಯಲಾಟಕಿಳಿದೆ
ಹಿಡಿದು ಚಿಣೀ ದಾಂಡು !

ಎಲ್ಲ ಹೂವ ನಗೆಯ ಮುಗುಳಿ-
ಗಿಂತ ನಿನ್ನ ನಗೆಯು ಹೆಚ್ಚು.
ಅಂತೆ ನಮಗೆ ಅಚ್ಚು ಮೆಚ್ಚು
ನೀನು ಕೇಳು, ಪಾಂಡು !
ನೀನು ಬೆಳೆದು ಬಂದ ಕಥೆಯ
ನಿನ್ನ ಕಿವಿಯಲುಸುರಿ ಬಿಡುವೆ.
ಕೆಳಗಿಡೊಂದ್ಯೆ ಒಂದೆ ಕ್ಷಣ
ನಿನ್ನ ಚಿಣೀ ದಾಂಡು !

೨

ನಿನಗೆ ಬರಲು ಬೇನೆಯುರಿ
ತಾಯಿಗೆಲ್ಲ ಹೊಟ್ಟೆಯುರಿ
ಮತ್ತೆ ನಮಗೆ ಸಂಕಟವು
ಕೇಳಿದೆಯಾ, ಪಂಡಿ ?
ಹುಳ ಕಡಿಯಲ್ಲು, ಮುಳ್ಳು ನಡಲು
ವಾತ-ಶೀತದಿಂದ ಒಡಲು
ಕೆಡಲು ಮತ್ತೆ ಚಳಿಗಾಳಿಗೆ
ಬಾಧಿಸಿರಲು ಥಂಡಿ !

ನಿನ್ನ ಕೆಣಕೆ ಶ್ವಾಸ-ಪಿತ್ತ
ತೇಲುಗಣ್ಣರಾಗಿ ಚಿತ್ತ
ವ್ಯಾಕುಲವಿರೆ ಹಗಲಿರುಳೂ
ನಿದ್ದೆಯಿಲ್ಲ, ಪಂಢಿ !
ಮತ್ತದೊಮ್ಮೆ ನಿನ್ನಳುವಿನ
ಗೂಢ ತಿಳಿಯದಾಗೆ ಮೂಢ-

ರಂತೆ ದಿಕ್ಕು ತಪ್ಪಿ ನಾವು
ಅತ್ತುದುಂಟು, ಕಂದ!

ಇಳೆಯನೆಲ್ಲ ನೇಸರಂತೆ
ನೀನು ನಮ್ಮ ಮನೆಯ ತುಂಬಿ
ನಿನ್ನ ಕಿರಣದಲ್ಲಿ ಹರಣ
ಲೀನವಾಯ್ತು, ಕಂದ!
ನಿನ್ನ ನಗೆಯು ಬಗೆಯ ಬೆಳಗಿ
ಮೋಡ ನಿನ್ನ ಕವಿಯೆ ಮುಳುಗಿ-
ಸಿತ್ತು ಮನವ ಚಿಂತೆಯಲ್ಲಿ.
ನೀನದೇನು ಕಂಡ!

ಒಮ್ಮೆ ನಿನ್ನ ಅಳುವಿನುಸಿರು
ಕೆಳಗಿಳಿಯದೆ ಮೇಲೆ ತೇಲು-
ತೆಲ್ಲಿ ಹಾರಿಹೋಯಿತೆಂದು
ರೋದಿಸಿದೆವು, ಕಂದ!
ಅದನು ಮನೆಯಲೆಲ್ಲ ಹುಡುಕಿ
ವೈದ್ಯರ ಮನೆಗೋಡಿ ದುಡುಕಿ
ಕೊನೆಗೆ ದೇವನನ್ನೆ ಕಾಡಿ
ಶೋಧಿಸಿದೆವು, ಕಂದ!

ಹೀಗೆ ನಿನ್ನ ಬೆನ್ನುಬಿಡದೆ
ಅಂಗರಕ್ಷಕರಂತೆ ನಿಂತು
ಊಟ ನೋಟವನ್ನು ಮರೆದು
ತೆರೆದು ಕಣ್ಣುಕಿಂಡಿ
ದೊಡ್ಡವ ನೀನಾಗಲೆಂದು
ನಮ್ಮ ಜೀವ ಸಣ್ಣಗಾಯ್ತು.
ಆದರದೇ ನಮ್ಮ ಭಾಗ್ಯ-
ವೆನ್ನುತಿಹೆವು, ಕಂದ!

೩

ಮೊದಲು ನಿನ್ನ ತಾಯಿ, ನಾನು
ನಿನ್ನ ಕಣ್ಣುಗೊಂಬೆಯಾಗಿ
ಮುಗಿಲ ಮರೆಸಿ ನಿನ್ನನಿಳೆಗೆ
ಅಂಟಿಸಿದೆವು, ಪಂಡು !
ಮುಂದೆ ಬಂತು ಬೇರೆ ಮಾಟ
ಪ್ರಕೃತಿಯ ಚೆಲುವಾಟ ನೋಟ
ನಿನ್ನ ಮುದ್ದು ಮನವ ಸೆಳೆದು
ಬಂತು ಗಿಳಿಯ ಹಿಂಡು !

ತೋಟದಲಿಹ ಹೂವಿಗೆಲ್ಲ
ತಟಸೆ ನಾವು ನಿನ್ನ ಗಲ್ಲ
ಕಣ್ಣರಳಿಸಿ ಕೈಯ ಚಾಚಿ
ನಕ್ಕೆ ನೀನು, ಪಂಡು !
ನಕ್ಕವಾವು ಬಣ್ಣದರಳು
ನೋಡಿ ನೀನದಿಂತು ಮರುಳು-
ಗೊಂಡು ಮೆಯ್ಯಮರೆತು ನಲಿಯು-
ತಿರಲು, ಚೋದ್ಯಗೊಂಡು.

ಮುಂದೆ ನೀನು ಸೂರ್ಯ, ಚಂದ್ರ,
ಮೋಡ, ಬಿಸಿಲು, ಬೆಳುದಿಂಗಳು,
ಅರುಣೋದಯ ವರುಣೋದಯ-
ಗಳನು ನಲಿದೆ ಕಂಡು.
ಅಕ್ಕ, ತಂಗಿ, ಗೆಳೆಯರತ್ತ
ಧಾವಿಸಿತ್ತು ನಿನ್ನ ಚಿತ್ತ.
ತಪ್ಪಡಿಯಿಕ್ಕುತಲಾಡಿದೆ
ಹೊಸತು ಸೊಬಗನುಂಡು.

ಚಂಡು, ಬಂಡಿ, ರೈಲುಗಾಡಿ,—

ಗಾಡಿ ಗಾರುಡಿಗನ ಮೋಡಿ-
ಯಹುದು ನಿನಗೆ! ಅದರ ಧ್ಯಾನ
ನಿತ್ಯವಿರಲ್ಲು, ಪಂಡು!
ಬೆಳ್ಳಿಯಂಥ ಗರಿದೆರೆಯುತ
ಮುಗಿಲಿನಲ್ಲಿ ಮರೆಯಾಗುತ
ಬಹ ವಿಮಾನಗಳನು ಕಂಡೆ
ಎಬ್ಬಿಸಲವು ಬಂಡು.

ಸಿರಿಮಣಿತದ ಮಳೆಬಿಲ್ಲು.
ಕೋಕಿಲ ಹಾಕಿದ ಸಿಳ್ಳು
ಮಾಡಿದವಿವು ನಿನ ಮಳ್ಳು
ನಲ್ಲುವರನೆ, ಪಂಡು!
ಮುಂಗಾರಿಯ ಹೊಸ ಹೊಂಚು
ಥಳಥಳಿಸುವ ಕೋಲ್ಮಿಂಚು
ಮುಮ್ಮಾಗಿಯ ಒಳಸಂಚು
ನಡೆದವು ಮನ ಕೊಂಡು!

ತುಂಬಿತು ತಾಯಿಯ ಒಲವು
ನೆಲದಾಯಿಯ ಹಿರಿಚೆಲುವು
ಮಾನವ ಹೃದಯದ ಗೆಲುವು
ನಿನ್ನೊಳಗನು, ಪಂಡು!
ನೀನೊಲವಿನ ಸಮ್ರಾಟ್ಟ,
ಮಾಮಾಯೆಯ ಕಣ್ಕೋಟ್ಟ,
ಬಾನ್ನೆಲಗಳ ಸಂಕೂಟ್ಟ,
ಅಮರೇಂದ್ರನ ತುಂಡು!

೪

ಈಗ ನೀನು ಆಟಗೂಳಿ
ಹುಡುಗನಾಗಿ ಬೆಳೆದು ನಿಂತೆ.

ಇನ್ನು ನಿನಗದೇನು ಕೇಳಿ
ಹೇಳುವದಿದೆ, ಪಾಂಡು.
ಆಡು. ಒಳ್ಳೆಯಾಟವಾಡು.
ಓಡು. ದಿಕ್ಕು ದಿಕ್ಕಿಗೋಡು.
ಬಾಳಿನಾಳವಳೆದು ನೋಡು
ಒಂದೆ ಸಮನೆ ಕಂಡು.

ಅರ್ಧ ನಮ್ಮ ಮೋಹವೆಂದು
ಅರ್ಧ ದೇವನಾಜ್ಞೆಯೆಂದು
ನಾವು ನಿನ್ನ ಪರಾಂಬರಿಸಿ
ವಿರಮಿಸುವೆವು, ಪಾಂಡು!
ನಿಶ್ನನಾವ ಋಣದಲಿಡುವ
ಬಯಕೆಯಿಲ್ಲ; ನಿನ್ನ ಬಾಳು
ನಿನ್ನ ಮೋಹ ನಿನ್ನ ಭಕ್ತಿ-
ಗಿರಲಿ ಮೀಸಲೆಂದು.

ದೇವ ಹುಟ್ಟಿಸಿದನು ನಂಟು.
ನಮಗೆ ನಿನ್ನ ಬುತ್ತಿಗಂಟು
ಕಟ್ಟಿಕೊಡುವ ಕೆಲಸವೆಂದ.
ಅದನು ಮಾಡಿ, ಪಾಂಡು,
ನಿನ್ನಯ ದಾರಿಗೆ ಮಂಗಳ-
ವನೆ ನೋಡುವದೀ ಕಂಗಳ
ಪುಣ್ಯವು ತಾನಿರಲೆನುವೆವು
ಹರಕೆ ಹೊತ್ತುಕೊಂಡು!

ಜೀವವ ಜೀವವದಿಂತು
ತಾಯ್ತಂದೆಯು ಒಲವಾಂತು,
ಸ್ನೇಹದಿ ಮೋಹದಿ ನೋಂತು,
ಕೊನರಿಸುವದು, ಪಾಂಡು!

ಇದಕಲ್ಲವೆ ಬಾಳುವದು?
ಇದಕಲ್ಲವೆ ತಾಳುವದು?
ನಲುಮೆಯು ಮೈದಾಳುವದು
ಇದಕಲ್ಲವೆ, ಪಾಂಡು ?

ಅಂತೆ ತಾಯಿ, ತಂದೆ, ಮಗು,
ಅಂತೆ ಅಳುವು, ಮುಳುವು, ನಗು.
ಅಂತೆ ರಾಗರಸಿಕರೊಲುಮೆ,
ಅಂತೆ ನೇಹ, ಪಾಂಡು !
ಅಂತೆ ದುಃಖ, ಅಂತೆ ಹಗೆ,
ಅಂತೆ ಸಲುವ, ಕೊಲುವ ಬಗೆ :—
ಅಂತೆ ತಿಳಿವು ಬಾಳ್ಗಡಲಲಿ,
ಲಕುಮಿಯಂತೆ ನಿಂದು !

ತಿಳಿವನುಳಿಯೆ ಸಂಸಾರವು
ನೀರಿಲ್ಲದ ಕಾಸಾರವು ;
ದುಃಸಹ ದುಃಸ್ವಪ್ನವು ಸ್ಥಿರೆ ;
ಸೂರ್ಯನು ಸಿಡಿಲ್ಗುಂಡು.
ಆ ತಿಳಿವಿನ ಅರುಣಾಂಕುರ
ಮೊಳೆಯಲು ಬಾಳ್ವೆಯು ಶಂಕರ ;
ಇಲ್ಲದಿರಲು ಬರಿ ಸಂಕರ ;
ಬಯಲಿನ ಹುಯಿಲ್, ಬಂಡು.

## ೨. ಕುಮಾರಿ

೧

ಕೋತಿಯ ಕೈಗಿತ್ತ ಮಾಣಿ—
ಕಗಳ ಚಂಡಿನಂತೆ ಸ್ತ್ರೀಯು,
ನರವಾನರ ಹಾಳುಗೆಯ್ದು ಹೋಮಿಸಿರುವನು.
ಇಂದಿನಂತೆ ಅಂದಿಗೂ.
ಮುಂದದೇನೊ ದೇವ ಬಲ್ಲ.
ಪಶುವ ಪಶುವಿನಂತೆ ನಿತ್ಯ ಕಾಮಿಸಿರುವನು.

ನೃತ್ಯಾಂಗನೆ ಶೂದ್ರಗೆಂದು ;
ದೇವದಾಸಿ ದ್ವಿಜನಿಗೆಂದು ;
ವಾರಾಂಗನೆ ಕ್ಷಾತ್ರಗೆಂದು ನಮ್ಮ ಖ್ಯಾತಿಯು.
ಒಕ್ಕಲಿಗನಿಗುತ್ತುವ ಹೊಲ;
ಬಂಗಾರದ ತತ್ತಿಯಿಡುವ
ಕೋಳಿ, ಹುಂಜದಂಥ ವೈಶ್ಯಗೆಮ್ಮ ಜಾತಿಯು.

ಎರಿ-ಮಸಾರಿ ಹೊಲಗಳಂತೆ
ನೇಗಿಲದವ ಹಂಚಿಕೊಟ್ಟ
ಬಾಗಿಲೆದುರು ಬೀದಿಯಲಿಹ ಜನರಿಗೆಮ್ಮನು.
ಮತ್ತದೊಮ್ಮೆ ಮೊಲೆಗೂಸಿರೆ
ತೊಟ್ಟಿಲಕ್ಕೆ ಭಾಸಿಂಗವ
ಕಟ್ಟಿ ನಿಂತ. ಹುಟ್ಟಿಸಿರುವನೇಕೆ ಬೊಮ್ಮನು?

ಗಂಡು ಹುಟ್ಟದಿರಲು ವೈಶ್ಯ
ಕರೆಯದೆಮ್ಮೆಯಂತೆ ಸತಿಯ

ಕಟ್ಟಿ ಬೇರೆ ಹೆಣ್ಣಿನೊಡನೆ ಲಗ್ನವಾದನು
ಬಳೆಗಾರನು ಜಾತ್ರೆಯಲ್ಲಿ
ಬಂದ ಹೆಣ್ಣಿಗೆ ಬಳೆಯಿಡುವೊಲು ;
ಕಾವಣಗಳ ತೆರೆವುದರಲಿ ಮಗ್ನನಾದನು.

ಪಂಚಮರಂತೆಯೆ ನಮ್ಮನು
ಚತುರ್ವೇದ ಷಟ್ಶಾಸ್ತ್ರಗ-
ಳಿಂದ ದೂರವಾಗಿಸಿತ್ತು ದ್ವಿಜವೃಂದವು.
ಅಡುಮನೆಯಲಿ ದುಡಿಯುವಾಳು ;
ಪಡುಮನೆಯಲಿ ಬರಲು ಗೋಳು :
ಸಜ್ಜೆವನೆಯ ಬಿಜ್ಜೆಯೊಂದೆ ಬಾಳಿನಂದವು.

ಅಶ್ವಶಾಲೆ-ಗಜಶಾಲೆಯ
ಕಟ್ಟದೊಲಂತಃಪುರಗಳ
ಕಟ್ಟುತ ರಾಜಾಧಿರಾಜರೆಲ್ಲರುರಿದರು ;
ಪಕ್ಷಿಶಾಲೆಯಲ್ಲಿ ಗಿಳಿಗ-
ಳಂತೆ ರಾಣಿವಾಸದಲ್ಲಿ
ನಮ್ಮನಿಟ್ಟು ಪಂಜರದಲಿ, ಹಲ್ಲು ಕಿರಿದರು.

ಬೇರೆ ರಾಜ್ಯವಿಲ್ಲವೆನಲು
ಸಾವಿರಾರು ರಾಣಿಯರೇ
ಪ್ರಜೆಗಳೆಂದು ಭೂಪರೊರೆದರಾಳಿ ಮೆರೆದರು.
ಸೀತಾಫಲವನು ಹಂಚಿದ
ತೆರದಿ ದ್ರೌಪದಿಯನು ಹಂಚಿ-
ಕೊಳ್ಳುತದನು ಭ್ರಾತೃಪ್ರೇಮವೆಂದು ಕರೆದರು.

ಹೇಲನಳೇನು ಪದ್ಮಿನಿಯೇ-
ನೆಲ್ಲರ ಗತಿಯೊಂದೆ: ಹೆಣ್ಣು
ಕಣ್ಣುಮೂಗಿನಿಂದ ನೆಟ್ಟಗಿರಲು, ನಾಡಿಗೆ

ಹುಟ್ಟಿ ಬೆಳೆದ ಮನೆಗೆ, ಲೋಕ-
ಕೆಲ್ಲ ಮಾರಿಯಾಗುವಂತೆ
ಕಾಮಿಸಿದರು ಬಂದು ಕೊಳ್ಳೆಯಿಟ್ಟು ಬೀಡಿಗೆ.

ಬ್ರಹ್ಮ ಸರಸ್ವತಿಯನಿಂದ್ರ-
ನಹಲ್ಯೆಯನು ಭೋಗಿಸಿದರು.
ಸ್ತ್ರೀಯು ಸುರರಿಗೆಲ್ಲ ಬರಿಯ ರಂಭೆಯೂರ್ವಸಿ;
ಲಲಿತ ಲಾಸ್ಯಲಹರಿಯಿಂದ
ಬಿಡುಗಣ್ಣರ ನೋಟಗಳನು
ಸೆಳೆದು ತುಟಿಗೆ ಮಧುಪಾತ್ರೆಯನಿಡುವ ಪ್ರೇಯಸಿ.

ಬಣ್ಣ ಬಣ್ಣವಡೆದ ಚಿಟ್ಟೆ-
ಗಳನು ಸಂಗ್ರಹಾಲಯದಲಿ
ಹೊಂದಿಸಿಟ್ಟ ತೆರದಿ ಮನುಜರೆಮ್ಮ ಹೊಂದಿಸಿ
ಪದ್ಮಿನಿ, ಶಂಖಿನಿ, ಚಿತ್ರಿಣಿ,
ಅಶ್ವಿನಿ, ಹಸ್ತಿನಿ, ಹರಿಣಿಯ-
ರೆಂದು ಭೋಗಿಸಿದರು ಜೀವಪ್ರಭೆಯ ನಂದಿಸಿ.

ಅವಯವಗಳ ಬಿಂಗಡಿಸುತ
ಕಾವ್ಯಕಾವಣದಲಿ ತೂಗು-
ತುಪಮೆಗೆಮ್ಮನೆಲ್ಲ ಮಾರಿ ಕವಿಗಳುಲಿದರು.
ಮೋರೆ ಚಂದ್ರ, ಕಣ್ಣು ಕಮಲ,
ತುಟಿಯು ತೊಂಡೆ, ತೊಡೆಯು ಬಾಳೆ-
ದಿಂಡು ಪಾದವಸುಗೆಯ ತಳಿರೆನುತ ನಲಿದರು.

ಕಾಮಶಾಲೆಯಲ್ಲಿ ಭೋಗ-
ಕಿಟ್ಟ ವಸ್ತುವಂತೆ ಬಣ್ಣೆ-
ಸಿರಲು ಬತ್ತಲಾಗಿಸುತ್ತ, ಯಾವ ಪುಣ್ಯವೊ ?
ಹಣ್ಣುಹಂಪಲಗಳ ಬುಟ್ಟಿ-

ಯಂತೆ ನಮ್ಮ ಚೆಲುವನೊಟ್ಟ
ಮಾರಲಿಟ್ಟ ಕಾವ್ಯಕೃತಿಯದೇನು ಗಣ್ಯವೊ ?

ಸುರಾಸುರರು ನರರು ನಮ್ಮ
ಕಾಯಕಾಮಧೇನುವನ್ನು
ಬಣ್ಣಿಸಿದರು ಭೋಗಿಸಿದರು, ಮಣ್ಣುಗೂಡಿಸಿ
ಆತ್ಮಕಲ್ಪಲತೆಯ, ಬಾಳ-
ನೆಲ್ಲ ಹೋಳಿಯಾಗಿಸುತ್ತ
ಕೊನೆಗಾಣದ ಶೋಕಗೀತೆಗಳನೆ ಹಾಡಿಸಿ.

೨

ಹೂವ ಮುಡಿಯಲೆಳಸಿದವರು
ಮುಳ್ಳು ನೋಡುತೆತ್ತುತಿಹರು ;
ಹಣ್ಣನಿಳಿಸುವವರು ಮರದ ಕೊಂಬೆಯಳವನೀಕ್ಷಿಸಿ.
ಹೆಣ್ಣಿಗೊಂದು ಜೀವವಿಹುದ-
ನೆಲ್ಲ ಮರೆತು ಕಣ್ಣುಮುಚ್ಚಿ
ಕಾಮಿಸುವರು ನರರು ದೇಹಸಿರಿಯನೊಂದಪೇಕ್ಷಿಸಿ.

ಸ್ತ್ರೀಯು ತಾನು ರಾಗಿಸಿರುವ
ಪುರುಷಗೀವ ಕಾಣ್ಕೆಯೆಂದು
ದಿವ್ಯರೂಪವಿತ್ತು ನಲಿದ ದೇವ ನಮ್ಮ ಜಾತಿಗೆ.
ರೂಪವನ್ನು ಸೆಳೆವ ಪಾಪ-
ಕನುದಿನವೂ ಸಿದ್ಧನಿರಲು
ನರನ ಚ್ಯುತಿಗೆ ಮೇರೆಯೆಲ್ಲಿ ? ನೆಲೆಯದೆಲ್ಲಿ ನೀತಿಗೆ ?

ಪುರುಷಾರ್ಥಗಳಿರದ ಬಾಳಿ-
ಗೆಲ್ಲಿದೆ ಚರಿತಾರ್ಥವೆಲ್ಲಿ ?
ಸ್ತ್ರೀಪುರುಷರ ಭಾಗ್ಯವೊಂದೆ ; ಒಂದೆ ಚರಿತವು.
ಇದನು ತಿಳಿಯದಾದ ಜೀವಿ-

ಗೆಲ್ಲಿ ಮೋಕ್ಷ, ಧರ್ಮ, ಕಾಮ?
ಅರ್ಥ ಬರಿಯನರ್ಥ; ಬಾಳು ದುರಿತದಿರಿತವು.

ಹೆಣ್ಣು ಬರಿಯ ಸ್ಥಾವರಾಸ್ತಿ;
ಪುರುಷನಾತ್ಮವೊಂದೆ ಸ್ವಸ್ತಿ-
ಯೆನುವ ಮನಕೆ ಮಾನವಕುಲದಾದಿಯಂತ್ಯವು
ತಿಳಿವುದೆಂತು? ಸಕಲ ದೇಹ-
ಗಳಲಿ ಮೊಳೆವ ಭಾವ-ರೂಪ
ಹೆಣ್ಣುಗಂಡಿವೆಂಬ ವೋಡಿಯಿರಲಚಿಂತ್ಯವು?

ಕ್ಲೀಬನಾ ಶಿಖಂಡಿಯೇನು
ಹೆಣ್ಣೊ ಗಂಡೊ ನುಡಿವರಾರು?
ಕೊಜ್ಜರಿಗುಡುಪಾವುದು ಸರಿ? ಸೀರೆ? ಧೋತರ?
ಒಂದೆ ಹೂವಿನಲ್ಲಿ ಲಿಂಗ-
ವೆರಡು ಕಾಣುವದ್ಭುತವಿರೆ
ಮನುವಂಶದಲಿದನು ತಿಳಿಯಲೇಕೆ ಕಾತರ?

ಮೀಸೆ ಹೊತ್ತ ಹೆಣ್ಣು ಕಂಡು
ಹೆಣ್ಣಿನಂಥ ಮಿದುವು ಮೆಯ್ಯ
ಮುಖಮುದ್ರೆಯ ಪುರುಷನೆದುರು ಸುಳಿಯಲರಿವೆವು,
ಹೆಣ್ಣು-ಗಂಡು ಕೂಡಿ ಬೆರೆವ
ರೂಪಗಳೆಂಬೊಂದು ಮಾತ;
ಗ್ಯಾನಿಮೀಡ-ಶೂರ್ಪನಖಿಯರೆಂದು ಕರೆವೆವು.

ಅಂತೆ ನಾವು ಹೆಂಗರುಳನು
ಗಂಡಿನೆದೆಯಲೊಮ್ಮೆ ನೋಡಿ
ಹೆಣ್ಣಿನ ತೋಳ್ ಬಲದಲೊಮ್ಮೆ ಗಂಡಿನಳವನು
ಕಂಡು ಝಾಂಸಿ ಚಾಂದಬೀಬಿ-
ಯುತ್ತರರನು ನೆನೆಯುತಿಹೆವು,
ಭಾವರೂಪದ್ವಂದ್ವ ಬೆರೆಯಲೀವ ಫಲವನು.

ಸಂಗವೊಂದೆ ; ಅಂಗ ಬೇರೆ.
ಆತ್ಮವೊಂದೆ; ಮನ-ಶರೀರ-
ದಲ್ಲಿ ಪುರುಷ-ನಾರಿ ಭಾವ-ರೂಪ ಬೆರೆಯುತ
ಮುಗಿಯದಿಹವನಂತ ವಿಧದಿ
ಸೃಷ್ಟಿಕ್ರಮವ ಮುಂದುವರಿಸಿ
ಜೀವಾತ್ಮನ ಭಾಗ್ಯ-ಭೋಗ್ಯಗಳನು ತೆರೆಯುತ.

೩

ಸೃಷ್ಟಿಕ್ರಮದಿ ಹೆಣ್ಣು-ಗಂಡು
ಒಂದನೊಂದು ಪೂರ್ತಿಗೊಳಿಸಿ
ಆಕಾಶದಿ ಸೌದಾಮಿನಿಯಂತೆ ಚಮಕಿಸಿ
ಬಾಳುತಿಹವು ಕತ್ತಲೆದೆಯ
ಸೀಳಿ ಚರಾಚರವ ತುಂಬಿ
ಭೂಮಿಯಿಂದ ಬಾನಂಗಳವರೆಗೆ ಗಮಕಿಸಿ.

ಸ್ತ್ರೀ ಕೋಮಲ; ಪುರುಷ ಕಠಿಣ.
ಸ್ತ್ರೀಯು ತಾಯಿ; ಪುರುಷ ತಂದೆ;
ಸ್ತ್ರೀಯು ಕರುಣೆ; ಪುರುಷ ಧೈರ್ಯ; ಇಂತು ಸೊಗದಲಿ
ಮಾನವಕುಲಕೊನರುತಿಹುದು
ತನ್ನ ತಾನೆ ಪೂರ್ತಿಗೊಳಿಸಿ
ಬುದ್ಧಿ ಮನಗಳಲ್ಲಿ, ಹೃದಯದಲ್ಲಿ, ಮೊಗದಲಿ.

ಇದ್ದ ಭೇದ ಕಳೆವುದೆಂತು ?
ಇರದಿಹುದನು ತರುವದೆಂತು ?
ಗಂಡಿನಂಥ ಹೆಣ್ಣು, ಹೆಣ್ಣಿನಂಥ ಗಂಡಿರೆ
ಅಲ್ಲಲ್ಲಿಗೆ, ಹೆಣ್ಣು-ಗಂಡು
ಬೇರೆಯಲ್ಲವೆನುವದೆಂತು
ಬೇರೆಯಾಗಿ ಬೆರೆತೊಂದಿಹ ಭಾಗ್ಯ ಕಂಡಿರೆ ?

ಅರ್ಧ ಪುರುಷನರ್ಧನಾರಿ-
ಯಾಗಿ ದೇವ ಮೂರ್ತಿಗೊಂಡ
ನೆಂದು ಕೇಳಿ ತಿಳಿದ ಲೋಕಕಿನ್ನು ಹೊಳೆಯಲಿ
ಭಾವರೂಪಭೇದಗಳನು
ಮೀರಿದಾತ್ಮವೊಂದೆಯೆಂದು.
ಮಣ್ಣಿನಂತೆ ಹೆಣ್ಣದೆಂಬ ಭಾವ ಕಳೆಯಲಿ.

ಕಾರ್ಯಗಳಲಿ ದಾಸಿ-ದಾಸ;
ರೂಪದಲ್ಲಿ ಲಕ್ಷ್ಮಿ-ವಿಷ್ಣು;
ಭೋಗದಲ್ಲಿ ರತಿ-ಕಾಮರ ಬಗೆಯು ಸುಳಿದಿರೆ
ಸಲುಹುವಲ್ಲಿ ತಾಯಿ-ತಂದೆ,
ಪ್ರೇಮದಲ್ಲಿ ಜೀವಯುಗಲ-
ವಾಗಿ ಗಂಡು ಹೆಣ್ಣಿರುವವು ಭೇದವಳಿದಿರೆ.

ನನ್ನ ಸ್ತ್ರೀತ್ವವನ್ನರಳಿಸಿ
ಪೂರ್ಣಗೊಳಿಸುವಂಥ ಪುರುಷ-
ಬಂದು ತನ್ನ ಪೌರುಷವನು ಬಳಿಗೆ ಮಾಗಿಸಿ
ಮುಂದಪೌರುಷೇಯದೆಡೆಗೆ
ನನ್ನ ಜೊತೆಗೆ ಸಾಗಿ ಬರಲಿ
ಕಾಲದಾಚೆ ಬಾಳ ನೌಕೆಯನ್ನು ನೂಗಿಸಿ.

## ೩. ಮದುವಣಿಗ

ಧ್ಯೇಯಜೀವಿಗಳ ಮತವೊಂದನ್ನು ಕಟ್ಟಿ
ಎದುರು ಬಂದಿರುವೆಡರುಗಳ ತುಳಿದು ಮೆಟ್ಟಿ
ನಿಂತ ದಿನವಾವುದೋ ಅಂದಿನಿಂದ
ಯುಗಯುಗಗಳಲ್ಲೊರೆದ ಕಾವ್ಯಗಳ ಚಂದ
ನಿನ್ನ ಮನ ಹಿಡಿದಿತ್ತು : ಪ್ಲೇಟೋನ ಕಾಣ್ಕೆ,
ಕವಿ ಸ್ಪೆನ್ಸರನ ಪೂಣ್ಕೆ, ಶೆಲ್ಲಿಯಾ ಮಾಳ್ಕೆ.
ದೇವನೆಮ್ಮನು ನೇಹದಿಂದೆರೆದು ಹೂಸಿ
ಸೂಜಿಮಲ್ಲಿಗೆಯ ಹಾಸಿಗೆಯ ಹಾಸಿ
ಮಲಗಿಸುವ ಮಣಿಮಂಚವಹುದು ಬಾಳೆಂದು
ಸಂತಸದಿ ನಾವೀರ್ವರೂ ನುಡಿವೆವಂದು.
ಬುದ್ಧ-ಶಂಕರರು ಸಹ ರಾಗಿಸುತ ಬಂದು
ಧರೆಗೆ, ಶಾಂತಿಯ ಪಡೆದರೆಂದೊರೆದೆವಂದು.
ಹೊಂಚು ಹಾಕಿದೆವಿಂತು ಗೆಳೆಯರುನ್ನತಿಗೆ—
ಭೂಮಿಯಲಿ ಸ್ಥಾನವಿರಲೆಂದು ಸನ್ಮತಿಗೆ.

ಆದರೋ ಗೆಳೆಯ ! ನಿನಗಿದಕಿಲ್ಲ ತೃಪ್ತಿ ;
ನಿನ್ನ ಮನದುತ್ಸಾಹವೆಣೆಯಿರದ ದೀಪ್ತಿ.
ಅಗ್ನಿಪವನರು ಕೂಡಿ ಮಾಡಿದರು ನಿನ್ನ
ಮನವೆನಲು, ದಶದಿಶೆಗೆ ನೀ ಹೊಳೆದೆ, ಚಿನ್ನ !
ಚಕ್ರವಾಕದ ತೆರದಿ ನಿನ್ನ ಸಂಭ್ರಮವು ;
ತಾರು ಬಿಟ್ಟಂತೆ ಪ್ರತಿನಿತ್ಯದನುಕ್ರಮವು !
ಕೈವಾಡವೆಲ್ಲವು ಪವಾಡವಿರುವಂತೆ,
ಮಾತನಾಡಿದುದೆಲ್ಲ ಮಂತ್ರವಿರುವಂತೆ
ನೀ ನಡೆದೆ. ನೂರಾರು ಲಹರಿಗಳು ಹಟದಿ

ಬಂದು ಸುಳಿಯಲು ನಿನ್ನ ತಲೆಯ ಗೊಮ್ಮಟದಿ
ತಮ್ಮಟೆಯ ಬಡೆದವನು ಸಖರ ಕರ್ಣದಲಿ
ನೀನು ತುಂಬುತ ಕುಣಿದೆ ರಾಗವರ್ಣದಲಿ.
ರಾಮರಾಜ್ಯದ ಬಗ್ಗೆ, ಯುಟೋಪಿಯದ ಹೊಂಚು:
ಒರೆಯುತಿರೆ,— ವಾಗೀನು ಹಾಳೆಗಳು ಹಿಂಚು !

ನಿರ್ಧನಿಕ ಪ್ರಾಚಾರ್ಯರಿರೆ ನಿನ್ನ ಸಖರು
ನಟವರರು ಕೂಡ ನಿನಗಲ್ಲ ಬಹಿರ್ಮುಖರು.
ನಿನ್ನ ಭಾಷಣ ಕೇಳಿ ಜನರಿರಲು ಮರುಳು,
ಕೊಂಕಲಿಲ್ಲವು ಗರುವದಿಂದೊಂದು ಕುರುಳು.
ನೀ ಚಲಚ್ಚಿತ್ರಗಳ ಕಾಮಸರಸಿಯಲಿ
ಧುಮುಕಿದ್ದೆ ತರುಣನಿರೆ ಕಲೆಯ ಪ್ರೀತಿಯಲಿ.
ಯಾವ ತಾರಾಗಣಕು ನೀ ಮಣಿಯಲಿಲ್ಲ ;
ಸೂತ್ರಿಸಿದ ಗೊಂಬೆಯಾಗುತ ಕುಣಿಯಲಿಲ್ಲ.
ಸಖನೆ ! ಕೆಲವರು ನುಡಿದ ಬಿನುಗುನುಡಿಗಳನು
ಮುಚ್ಚು-ಮರೆಯಿರದಾಡಲೇನು, ಕಿಡಿಗಳನು ?
ದಂಗುವಡಿಸಿದ ಜನರು ಬಾಯ್ಬಿಡುತ ನೋಡಿ
ಅಬ್ಬ ! ಹೊಸ ಮಾತು ! ಹೊಸ ರೀತಿಯೆಂದಾಡಿ
ಬೆರಗುಗೊಂಡಿರೆ ನಿನಗೆ ಸ್ವರ್ಗಸುಖವು ;
ತುಂಬುತರಳುವದಾಗ ನಿನ್ನ ಮುಖವು ;
ಇಂತು ನುಡಿವರು. ಅವರಿಗೇನು ಗೊತ್ತು
ನಿನ್ನಾತುಮದ ಮೂಲಧನವು, ಸೊತ್ತು ?
ಧ್ಯೇಯಜೀವಿಗಳಾಗಿ ನಿಂತವರ ಬಾಳು
ಉತ್ಸಾಹದುಯ್ಯಾಲೆ ; ತಡೆದಿರದು, ಕೇಳು !
ಚಿತ್ತಕ್ಷೋಭೆಯ ಕಳೆದು ಶಾಂತನಿರಲೆಂದೇ
ಕನಸಿನಾ ಕಿರುಗಣಿಗಳಲಿ ಹಾರಿಕೊಂಡೆ !
ಯಾವ ಕನಸಿಗು ಹಿಂಗದಿರಲು ರಣರಣಿಕೆ,
ಕೈಗೂಡದಿರೆ ಶಾಂತಿ, ಸುಳ್ಳಾಗಲೆಣಿಕೆ,

ಜೀವನಾಮೃತವೆ ಪರಮೌಷಧಿಯದೆಂದು
ಲಾವಣ್ಯವೊಂದೆ ಶರಣೋಪಾಯವೆಂದು
ಸುಕುಮಾರಿಯೊರ್ವಳನ್ನೊಸೆದು ನಿಂದೆ.
ಕಲ್ಯಾಣ ಮಂಟಪಕೆ ಮೆಲ್ಲನೈತಂದೆ.

ಸಖ ! ನಿನ್ನ ನಿರ್ಧಾರದಲಿ ಜಾಣ್ಮೆಯುಂಟು.
ಸತಿಯೆದುರು ಬಿಚ್ಚಿನ್ನು ಕನಸುಗಳ ಗಂಟು.
ನಿನ್ನಾಸೆ ಹಂಬಲವನವಳಿಗೊರೆಯಿನ್ನು.
ಮನವೆರಡು ಕೂಡಿರಲು ಬಾಳಿರಲಿ ಚೆನ್ನು.
ಕನಸು ನನೆಕೊನೆಗೊಳಲಿ ದಿನದ ಬಾಳಿನಲಿ.
ಕೇರಿಕೇರಿಯಲಿನ್ನು ಹಾಳುಬೀಳಿನಲಿ
ಪ್ರೀತಿಲಕ್ಷ್ಮಿಗೆ ಹಿರಿಯ ದೇಗುಲವ ಕಟ್ಟಿ
ನೀವು ಬಾಳಿರಿ ಗಾಳಿಗೋಪುರವನಟ್ಟಿ.
ಗುಳೆ ಹೋಗುವಾಲೋಚನೆಯದೇಕೆ ನಮಗೆ
ಸಖರೊಡನೆ, ನಿರ್ನಾಮವಿರಲು ಕೆಡಕು, ಹಗೆ
ಬುವಿಯಲ್ಲಿ ? ಶುಕ್ರನೊಲು ಜ್ವಲಿಸುತಿಹ ತೇಜ
ನಮ್ಮ ಜೀವಾತ್ಮರಿಗೆ ಸಂದಿಹುದು ಸಾಜ.
ಧೂಮಕೇತುವಿನಂತೆ ಅರಗಳಿಗೆ ಹೊಳೆದು.
ಸ್ವಚ್ಛಂದಿಸುವದೇಕೆ ? ಬಂಧನದಲುಳಿದು
ನಾವು ರಾಜಿಸಿರೋಣ ಮೆಲುಬೆಳಕುಗರೆದು
ಧಾರುಣಿಗೆ, ರೋದೋಂಗಣದಲೆಲ್ಲ ಮೆರೆದು.
ಆಳಿಯದಿದ್ದರು ತಮವು ಚಲಿಸಬಹುದು.
ಬಾಳಿನಂತಿಮ ಧ್ಯೇಯ ಫಲಿಸಬಹುದು.

---

# ೪. ವಿವಾಹಿತ

ಒಂದು ತಾವರೆಗೊಳದ ದಂಡೆಗೈತಂದು
ಅದರ ಸೌಂದರಕೆ ನೀ ಮನಸೋತೆಯಂದು.
ಕನಸಿಗನು, ನೀ ಕನಸುಗಳ ಮರೆಯೆ ಹೆಣಗಿ
ನಿಂತೆ ಬುದ್ಧಿಯುಪಾಸನೆಯಲಿ ಮೆಯ್ಯೊಣಗಿ.
ಅನುರಾಗವಹುದು ಮಹದಪರಾಧವೆಂದೆ.
ಆಜನ್ಮ ಮೋಹಕೆ ವಿರೋಧವೆಂದೆ.
ಕೊಳವು ಬೀಸಾಗಿರುವದೀಸಲೆಂದೆ.
ಇರಲೇನು? ಮರಣಕ್ಕೆ ಮೀಸಲೆಂದೆ.
ಒಳಗೆ ತಿರುಗಣಿಮಡವು; ನೋಡಲು ನಿವಾತ.
ಈಸುಬಿದ್ದವನಿಲ್ಲಿ ಮರುಕ್ಷಣಕೆ ಭೂತ.
ಇಂತು ಬುದ್ಧಿಯು ಬೋಧಿಸಿರುವಂತೆ ನಡೆದು
ಮತ್ತೆ ಹೊರಳಿದೆ ಕೊಳವನೀಕ್ಷಿಸಲು ತಡೆದು.
ಈಸುಬೀಳಲು ಮೆಯ್ಯು ತೂಗಾಡುತಿತ್ತು.
ಬುದ್ಧಿಯರೆದಾಡೆ ಮನ ಹೊಯ್ದಾಡುತಿತ್ತು.
ಕೊಳದೊಳಾವರ್ತಗಳು ಸುಳಿಸುಳಿಯುತಿರಲು
ಮುಂದೇನು ಬದುಕೆಂದೆ, ನೀನಳಿಯುತಿರಲು :
ನಾಗಮುರಿಗೆಯ ಬಿಗಿದು ಬರಲು ಘಟಸರ್ಪ
ನುಂಗಲಣಿಗೊಳಲು, ಮೆಯ್ಯಾಗಿರವೆ ಬರ್ಫ ?
ನಾಗಕನ್ಯೆಯ ಬದಲು ಬರುತಿರೆ ಹಿಡಿಂಬೆ
ಜೀವಿತದಲಾವ ಸುಖವನು ಸುರಿವುದೆಂಬೆ !
ಹೀಗಿಂತು ಧೇನಿಸಿದೆ ನೀ ಬುದ್ಧನಾಗಿ;
ಬುದ್ಧಿಚಕ್ರದಿ ಸಿಲುಕುತತಿ ಕ್ರುದ್ಧನಾಗಿ.

ಮುಂದೊಮ್ಮೆ ಗಾಳಿ ಕೊಳಲೂದುವುದ ಮರೆತು,
ನೀಲಗನ್ನಡಿಯಾದ ಕೊಳವಾಳವರಿತು
ತೆರೆಯು ಮರೆಯಾಗಿರಲು, ರವಿಯು ಪಡುವೆಸೆಗೆ
ನಡೆಯಲು ನಿಶಾದೇವಿ ಕರೆದಿರಲು ಹಸೆಗೆ,
ಹೃದಯದೇಕಾಂತದಾ ದಾರುಣತೆ ಮುಗಿದು
ತಿಳಿಯದೆಯೆ ಬುದ್ಧಿಯನು ಸೋಲಿಸುತ ಜಿಗಿದು
ಕೊಳದೊಳಿಣುಕುತಲೊಂದು ರೂಪವನು ಕಂಡೆ:
ಅದನು ಶೋಧಿಸಲು ಧೋಂಕನೆ ಹಾರಿಕೊಂಡೆ!
ಸುಕುಮಾರಿಯೊರ್ವಳಾ ಸೌಂದರವದೆಂದೆ:
ನಾರ್ಸಿಸಸನಂತೊಸೆದು ನಿನ್ನ ನೆಳಲೆಂದೆ.
ಹೇಗದೇನೋ ಪ್ರೀತಿಸರಸಿಯಲಿ ಮಿಂದು
ಮುಳುಗು ಹಾಕುತ ಚತುರ್ಭುಜನಾದೆಯಂದು!

ಅನುದಿನವು ಕೊಳದೊಳೀಗಿಸುತಿರುವೆ.
ತುಂಬಿದೆದೆಯಿಂದೊಲವ ಸೂಸುತಿರುವೆ.
ಈಸು-ಮುಳುಗು-ಸುರಂಗದಲಿ ನಿನಗೆ ಲಲ್ಲೆ,
ಮುತ್ತಿನನುಶೋಧದಲಿ: ನಾನಿದನು ಬಲ್ಲೆ.
ಮುತ್ತು ಸುರಿದಿಹ ಕಡಲಿನಾಳದಲ್ಲಿ
ಮೊಳಗುವ ತರಂಗಗಳ ಮೇಳದಲ್ಲಿ
ಮುಂದೆ ನೀನೀಜಲೆಸಗುವ ಕಾಲ ಬರಲು,
ನೆನಪಿರಲಿ ಈ ಗೀತೆಯನ್ನೊರೆದ ಕೊರಲು.

## ೫. ಪತಿ

೧

ನಾನದೊರ್ವ ಮುಗುದೆಯನ್ನು
ಸಹಜವಾಗಿ ಪ್ರೀತಿಸಿದ್ದೆ.
ಪ್ರೀತಿಗಿರುವ ಮಹತಿಯರಿದು.
ಆದರೇನು? ಪ್ರೀತಿಸಿದ್ದೆ.

ಪ್ರೀತಿಯೆಂದರೇನೊ! ಕಾಣೆ!
ಒಂದು ಹೂವ ವಂದಿಸುವೆವು.
ಅದನು ತಂದು ಮೂಸಿ ನೋಡಿ
ಕುರುಳೊಳಿಟ್ಟು ಕಂದಿಸುವೆವು.

ಬಾಡಿ ನಿಲಲು, ಹೋದ ಚೆಲುವ
ನೆನೆಸಿ ನೆನೆಸಿ ರೋದಿಸುವೆವು.
ಮನಕೆ ಮತ್ತೆ ಸ್ಥಿರತೆ ಬರಲು
ಕಳೆದ ಹೂವ ಶೋಧಿಸುವೆವು.

ನಾನದೊರ್ವ ಮುಗುದೆಯನ್ನು
ಸಹಜವಾಗಿ ಪ್ರೀತಿಸಿದ್ದೆ;
ನಸುಕಿನಂತೆ ಹೊಳೆವ ಗಲ್ಲ–
ಗಳನು ಹಿಡಿದು ಮುದ್ದಿಸಿದ್ದೆ.

ಅವಳ ನಗೆಯ ಮೊಗ್ಗೆಯಲ್ಲಿ
ಮನವು ಸ್ವರ್ಗವನ್ನು ಕಂಡು
ಎಳಸಿತದನು ಪಡೆಯಲೆಂದು
ಕೆಂದುಟಿಗಳ ಸವಿಯನುಂಡು.

ಮುಗುದೆ ಜಗವನರಿಯುದಿಹಳು.
ನಲುಮೆಯೊಂದೆ ಅವಳ ಪಾಠ !
ನಲುಮೆಯವಳ ವಿದ್ಯೆ-ಬುದ್ಧಿ ;
ಹೃದಯವದಕೆ ರತ್ನಪೀಠ.

'ಯಾವ ಜ್ಞಾನವಿಲ್ಲವೆಂದು
ಬೀಳುಗಳೆವರಾರು ಸುಮವ ?
ಇತ್ತು ನೋಡು ನಿನ್ನ ಬಾಳ್ವಿ-
ಗೊಂದು ಸುಮನಕಿರುವ ಕ್ರಮವ !

ಜೀವಯುಗಲವಾಗಿ ನಾವು
ಕೆಲವು ಕಾಲ ಜೀವಿಸಿದೆವು.
ಇಳೆಯನೊರ್ವ ನಲ್ಮೆಯರಸಿ-
ಯಾಳ್ವಳೆಂದು ಭಾವಿಸಿದೆವು.

ಅಂದು ತಂದ ಮೊಗ್ಗೆಯರಳಿ
ನಳಿನವಾಗಿ ರಾಜಿಸುವದು.
ಕೊಳದ ಬೇರೆ ಕಾಂತಿಗಳನು
ಮಾಜಿಸುತ ವಿರಾಜಿಸುವದು.

ನಗೆಯ ಮೊಗ್ಗೆಯಲ್ಲಿ ಸ್ವರ್ಗ-
ವನ್ನು ಕಂಡ ನನ್ನ ಜೀವ-
ವಮೃತಜಲಧಿಯೊಂದನೀಸಿ
ದಣಿದು ತಣಿಯುತಿಹುದತೀವ.

ದುರುಳರೆನಿತೊ ಬುವಿಯೊಳಿಹರು.
ಅವರ ಬಾಳಿನಳುಕದೆಲ್ಲಿ,—
ಮನಕೆ ಬಂದ ವನಿತೆ ಬೀರ್ವ
ನಗೆಯು ತಿಂಗಳಿರವಿನಲ್ಲಿ ?

ಶರಧಿಮಧ್ಯದಲ್ಲಿ ಪಯಣ
ಬೆಳಸಿ ನೆಲವ ಕಾಣದಂತೆ
ಮರೆತುಹೋಯ್ತು ಧರೆಯ ಬಾಳು.
ನಲುಮೆಯಲ್ಲಿ, ಕನಸಿನಂತೆ.

೨

ನನ್ನ ಗುಡಿಗೆ ಕಳಸವಿಟ್ಟು
ಮನೆಯಲಿಂತು ಬೆಳಕು ಕರೆದು
ಮೃತ್ಯು ಬಂದು ನನ್ನೆಗೆಯ್ಯಲೊಡನೆ ನಡೆವರೆ ?
ಇನಿತು ದಿನವು ಪ್ರೇಮಸುಧಾ-
ಸೇವನೆಯಿಂದಮರರಾಗಿ
ನಂದನದಲಿ ನಿಂತಿಹುದನು ಮರೆತು ಬಿಡುವರೆ ?

ಹಿಂದು ಮುಂದು ನೋಡದಂತೆ
ಬಂದಿತೆನಲು ಬಂದುಬಿಡುವ
ಸಾವೆ ! ಬಂದಿವಾಸಿಗಳೊಡನೆಲ್ಲಿ ನೆಲಿಸಿಹೆ ?
ನಿಲ್ಲಿಸೆನ್ನನಲ್ಲಿಗೊಯ್ಯು.
ಭೃತ್ಯನಾಗಿ ಕೆಲಸವೆಸಗಿ
ಕೂಲಿಯೆನಲು ಕಾದಲಳನು ಕಾಣಬಯಸಿಹೆ !

ನಾವೀರ್ವರು ನಲಿಯುತಿರಲು
ಧರೆಯ ಸೊಬಗನೆಲ್ಲ ಮರೆತು
ನಮ್ಮ ಲೋಕ ಬೇರೆಯೆಂದು ನುಡಿದೆ ಮೊನ್ನೆಯೇ.
ಇಳೆಯ ಚೆಲುವದೆಲ್ಲವಿಂದು
ಬಂದೆದುರಿಗೆ ಕುಣಿದರೇನು ?
ನಿನ್ನ ಮುದ್ದು ಮೊಗವ ಮರೆಯದಾದೆ ಚೆನ್ನೆಯೆ !

ಧಾರುಣಿಯಲ್ಲೆರಡು ಜೀವ
ಕೂಡುತೊಂದೆಯಾಗಿ ನಿಲಲು

ಬಾಳನೆಲ್ಲ ದಿವ್ಯವಾಗಿಸುತ್ತ ಹೊಳೆವವು.
ಹಗಲು-ಇರುಳು, ಗಂಡು-ಹೆಣ್ಣು
ಸಂಧಿಸುತ್ತ ಕೂಡಲೊಮ್ಮೆ
ನಸುಕು-ನಲುಮೆಯುಂಥ ಕಾಂತಿಯಾಗಿ ಎಳೆವವು.

ಬುದ್ಧಿಗಿಂದು ಅಮಾವಾಸ್ಯ.
ಹೃದಯಕಿಹುದು ಬಿಸಿಲ ಬೇಗೆ.
ನಸುಕು-ನಲುಮೆ ನನ್ನ ಬಾಳಿಗಿಲ್ಲದಾದವು.
ಪಂಚಪ್ರಾಣಗಳನು ನಿತ್ಯ
ಪಂಚಾರತಿಯಾಗಿಸಿದ್ದೆ;
ಬೆಳಕುಗಳಿವು ನನ್ನ ಬಾಳನೊಲ್ಲವಾದವು.

೩

ನಿನ್ನನಗಲಿ ಬಾಳ್ವೆನೆಂದು
ನೀನು ಬರುವ ಗ್ರಹಿಕೆಯಿರಲು.
ನೋವನೆಲ್ಲ ಮೀರಿ ನಿಂತೆ
ನಿನ್ನ ಪ್ರೀತಿಯೋಲೆ ಬರಲು :
ನೀನೆ ಬರಲು ಕುಣಿದೆ ಹರಹಿ
ಭಾವನೆಗಳ ಸೋಗೆಯ.
ಆದರಿಂದು ತಾಳ್ವುದೆಂತು
ಚಿರವಿರಹದ ಬೇಗೆಯ ?

ನನ್ನನೂರು ಕನಸುಗಳಲಿ
ನಿನ್ನ ರೂಪ ಹೊಳೆದು ಹೊಯ್ತು.
ನನ್ನ ಸಾವಿರಾಸೆಗಳಲಿ
ನಿನ್ನ ಚೆಲುವು ಸೂರೆಯಾಯ್ತು.
ಆದರೆಂದಿಗಿನ್ನು, ನಲ್ಲೆ !
ಅಮೃತಕರಸ್ಪರ್ಶನ ?

ದೈವವಿಲ್ಲದಲೆವ ಪಾಪಿ-
ಗೆಂದು ನಿನ್ನ ದರ್ಶನ?

❤

ಒಮ್ಮೆ ಕಣ್ಣುಕಟ್ಟೆ ನನ್ನ
ಮನವ ತುಂಬಿ ಬಂತು ಬೆಳಕು.
ಇಂಥ ಬೆಳಕು ಮುಕ್ತಿಯೆಂಬೆ
ನೆಲದಲಾಡುತಿರುವ ಹುಳಕು.

ನಡುವೆ ನಿನ್ನ ರೂಪ ಪ್ರೀತಿ-
ಸರಸಿಯಲ್ಲಿ ಕಮಲದಂತೆ
ಹೊಳೆದು ಬಂತು, ನನ್ನ ಕಣ್ಣು
ಮುಚ್ಚದಂತೆ ಮರೆಯದಂತೆ.

ಕೇಳಿ ಬಂತು ನಿನ್ನ ವಾಣಿ
ಮುಗಿಲೆ ಮಾತನಾಡಿದಂತೆ ;
ಮುಳುಗರಿಯದ ಪ್ರಭಾಕರನು
ಚಿನ್ನಭದಲಿ ಮೂಡಿದಂತೆ :

" ನಲುಮೆ ನಸುಕಿನಂತೆ ಹುಟ್ಟಿ
ಹಗಲಿನಂತೆ ಸುಡಲು, ನಲ್ಲ !
ನಿನ್ನ ಜೀವವಳುಕಿತೇಕೆ?
ತೋಯಿತೇಕೆ ನಿನ್ನ ಗಲ್ಲ ?

ಕಣ್ಣಿನೊಳಗದೊಂದು ಕಣ್ಣು
ಸೃಷ್ಟಿಯೊಳಗದೊಂದು ಸೃಷ್ಟಿ—
ಇಂತು ತ್ರಿಭುವನಂಗಳನ್ನು
ನಿರ್ಮಿಸಿದನು ಪರಮೇಷ್ಠಿ.

ತೊಗಲುಗಣ್ಣು ಕಾಣ್ಬ ನಸುಕ-
ನಳಿಸಿ ಹಗಲು ಬಂತು ಬಳಿಗೆ.
ಬಗೆಗಣ್ಣಿದು ತೋರ್ವ ಬೆಳಗು.
ನಿಲ್ಲು ನೋಡುತೊಂದು ಗಳಿಗೆ.

ಪ್ರೀತಿ ಜನ್ಮ ತಳೆಯಲೆಂದು
ದೇಹ-ಮನದ ಚೆಲುವು ನಿನ್ನ
ರಾಗ-ಭೋಗಗಳನು ಸಫಲ-
ಗೊಳಿಸಿ ಬಂದಿತಂದು, ಚಿನ್ನ:

ನಿನ್ನ ಪ್ರೀತಿ ಚಿಗಿತು ಮೊಳೆತು
ವೃಕ್ಷವಾಗಿ ನಿಲ್ಲಲಾಗ
ಸಾಜವಾಗಿ ಮಾಯವಾಯ್ತು
ನಿನ್ನ ಮನವ ಕೊಂಡ ಭೋಗ.

ಪ್ರೀತಿಯೆಂದರೇನು? ದೇಹ-
ವಮರಗೊಳಿಪ ತಂತ್ರವಲ್ಲ.
ತಾರುಣ್ಯವ ಕಳೆಯದಂತೆ
ಸೆರೆ ಹಿಡಿಯುವ ಜಂತ್ರವಲ್ಲ.

ನಿದ್ರೆಗೆಯ್ವವಾತ್ಮಪುರುಷ-
ನೆಚ್ಚರಿಸುವ ಮಂತ್ರ, ಪ್ರೀತಿ.
ಮಾಯಾಕೋಲಾಹಲವದು;
ಮಾಯೆಯದರ ಮೊದಲು ರೀತಿ.

ಹಿಂಬಾಲಿಸುತಿಂದು ಕಂಡ
ಬೆಳಗ, ಮುಂದೆ ಸಾಗು, ನಲ್ಲ!
ಅಮರಜ್ಯೋತಿಯೊಗೆವ ಕಿರಣ-
ದಲ್ಲಿ ಏದಿತವಿರುವದೆಲ್ಲ.

ನಿನ್ನ ಬಗೆಯು ತೆರೆದ ನಾಡಿ-
ನಲ್ಲಿ ಮುಂದುವರಿಯುತಿರಲು
ಮುಗಿಲುಗಣ್ಣನಾಗಿ ನಿಲುವೆ
ಮುಂದಕೆ ಧ್ರುವತಾರಕೆಯೊಲು.

ಆಗ ನನ್ನ ಜ್ಯೋತಿದೇಹ
ಕೂಡ ಮೂಲದಲ್ಲಿ ಕಳೆದು
ಒಂದೆ ಬೆಳಕಿನೆರಡು ಕಿರಣ-
ವಾಗುತಿರುವೆವಾವು ಹೊಳೆದು. ”

೫

ಕಣ್ಣು ಕಟ್ಟಿದಂಥ ರೂಹು
ಮುಗಿಲಾಚೆಗೆ ಹೊಳೆದು ಕಳೆಯೆ
ಮುಗಿಲಿನಂಥ ವಾಣಿಯ ಸಂ-
ಗೀತ ಮೆಲ್ಲ ಮೆಲ್ಲನಳಿಯೆ

ನಿಂತೆ ನಾನು, ಬಾಲ್ಯದಿಂದ
ತಾನು ಪ್ರೀತಿಸಿರುವ ಕನ್ನೆ
ಮರಣದಾಚೆ ನಾಡ ಸೇರಿ
ಸ್ವರ್ಲೋಕದ ದಾರಿಯನ್ನೆ

ತೋರ್ವ ಮೋಕ್ಷಲಕ್ಷ್ಮಿಯಿರಲು
ಬೆರಗುಗೊಂಡ ದಾಂತೆಯಂತೆ :
ಇನ್ನೇತರ ಕೊರತೆ ನನಗೆ ?
ಇನ್ನೇತಕೆ ಶೋಕ, ಚಿಂತೆ ?

ಮುಗುದೆಯಿರಲು ಮೋಕ್ಷಪ್ರದೆಯು
ಬಾಳು ತುಂಬುತಿರುವದು ;
ಪ್ರೀತಳೊರೆದ ಫಲಶ್ರುತಿಯು
ಜೀವ ನಂಬುತಿರುವದು.

---

## ೬. ಅನ್ಯಾನುರಕ್ತ ಪತಿ

ನನ್ನ ಪರಿಧಾನದಲಿ
ನನ್ನೊಂದು ಧ್ಯಾನದಲಿ
ತಿಳಿಯದಲೆ ಬೆಳಕಾದೆ ನೀನು ಬಾಲೆ!
ಮನವಿರಲು ಮುಗಿಲಂತೆ
ಹೊಳೆದೆ ರೋಹಿಣಿಯಂತೆ,
ನಿನ್ನ ಕಾಂತಿಗೆ ನನ್ನ ಜೀವ ಸೋಲೆ.

ನಿನ್ನ ಬಿತ್ತರ, ನಿಲುವು,
ನಿನ್ನ ಮೆಲುನುಡಿ, ಗೆಲುವು,
ನಿನ್ನ ಮೊಗದಾ ತುಂಬುವೆರೆಯ ಸಿರಿಯು
ಅಹುದು ಸುಂದರ ಸರಳ;
ನಿನ್ನಂಥವರು ವಿರಳ-
ವೆಂದೊಲಿದುಲಿದು ಹರಿದೆತೆದೆಯ ಝುರಿಯು.

ನಾ ನಿನ್ನ ಬಯಸಿಲ್ಲ;
ಕಾಮವನು ಬೆರಸಿಲ್ಲ
ನಿನ್ನನರ್ಚಿಸಿದ ಅನುರಾಗದಲ್ಲಿ;
ಬರಿ ನಿನ್ನ ಕಣ್ಣಾಕಳೆ,
ಬರಿ ನಿನ್ನ ನಗೆಯ ಹೊಳೆ,—
ಮಿಗಿಲಾದುವಿವೆ ನನ್ನ ಭೋಗದಲ್ಲಿ.

ಹೆಣ್ಣು,—ಮುಟ್ಟಲು ಮುಳ್ಳು;
ಗಂಡಿನೆದೆ ಬಲು ಮಳ್ಳು.
ಅದಕಂತೆ ರತಿಚಕ್ರದಲ್ಲಿ ಸಿಲುಕಿ
ಗೋಳಿಡುವ ಮನಸಿಲ್ಲ;
ಇಡಿಸುವಾ ಕುನಸಿಲ್ಲ
ಎಂದೆ—ನಿನ್ನಾತ್ಮವೊಂದನ್ನೆ ಸಿಲುಕಿ.

ಒಮ್ಮೆ ದೈವವ ಕೆಣಕಿ
ಮೋಹದಿರುಳಲಿ ಮಿಣುಕಿ
ನಿನ್ನ ರೂಪವ ಸೂರೆಗೊಂಡೆನೆನ್ನು.
ನಿನ್ನ ರೂಪವದಂದೆ
ಮಾಯವಾಗಿರೆ ಮುಂದೆ
ಬಿಟ್ಟಿರದು ಬಾಳಿನಾ ಹುದುಲು ಬೆನ್ನು.

ನಿತ್ಯನೂತನವಹುದು
ಚೆಲುವಾದರಿಲ್ಲಿಹುದು
ಲಾಕ್ಷಣಿಕವಾದ ಬೇರೊಂದು ಮಾತು
ಚಿರನವೀನತೆಯೆಲ್ಲಿ?
ಮನದ ಸಮರಸದಲ್ಲಿ :—
ಆದರಂಗಳದಿ ಎಲ್ಲ ಚೆಲುವು ಹೂತು.

ಅರ್ಥದಲಿ ಕಾಮದಲಿ
ಧರ್ಮದಲಿ ಪ್ರೇಮದಲಿ
ಜೀವವಿನ್ನೊಂದಕ್ಕೆ ನಾನು ಜೊತೆಯು.
ಒಲಿದ ಹೆಣ್ಣೊಡನಿದ್ದು
ಬಾಳನಾಗಿಸೆ ಮುದ್ದು—
ಅದೆ ಯೋಗ; ಇನ್ನೊಂದು ಭೋಗ ವ್ಯಥೆಯು.

ಹೋಗು. ನಿನ್ನವನರಸು.
ಜೀವಜೀವವ ಬೆರಸು.
ನಿನ್ನ ಬಾಳುವೆಯೆಲ್ಲ ಸುಗಮವಿರಲಿ.
ಅರ್ಥದಲಿ ಕಾಮದಲಿ
ಧರ್ಮದಲಿ ಪ್ರೇಮದಲಿ
ನಿನ್ನ ಕೈ ಹಿಡಿವಾತ ಸಾಗಿಬರಲಿ.

———

## ೭. ತಾಯಿ   

ಕರುಣೆಯೆಂಬುದನರಿಯೆ. ಬಲ್ಲೆ ನಿಯಮವನೊಂದ:—
ಆಳುತಿಹುದೆಂದಿನೊಲು ಧರೆಯನಿಂದು.
ಅವರಾಳ್ಕೆಗೊಳಪಟ್ಟು ಸಾಗಿರುವ ವಿಶ್ವದಲಿ
ಬವಣೆಬಟ್ಟರೆ ಬಾರದಿರದೆ ಕುಂದು ?

ಮುಳ್ಳುಗಂಟಿಯದೊಂದು ; ಹೂವಿಹವು ನೂರೊಂದು.
ನಡೆಯುತಿಹುದಿಂತೆಯೇ ಸೃಷ್ಟಿಕ್ರಮವು.
ಶುದ್ಧಕಲ್ಪನೆಯೊಂದು ; ಚಿತ್ರಗಳು ಮನೆಗೊಂದು.
ಇದನಲ್ಲಗಳೆಯುವದು ಬರಿಯ ಭ್ರಮವು.

ಸತಿಯಾದ ಮಾನಿಸಳು ಮಾತೆಯಾಗದೆ ನಿಲಲು
ಬಾಳುವೆಗೆ ಮುಕುಟವನು ತೊಡಿಸದಂತೆ ;
ನಮ್ಮ ಜೀವವ ಧಾರೆಯೆರೆದಿರಲು ಸರಸತಿಗೆ,
ಮುಂದೆ ಮನದಲರುಗಳ ಮುಡಿಸದಂತೆ.

ಧ್ಯೇಯವೇನೇ ಇರಲಿ ರೂಪವಿಹುದೊಂದದಕೆ.
ರೂಪವೆತ್ತದ ಸೃಷ್ಟಿ ಕಾಣ್ಬುದೆಲ್ಲಿ ?
ಮಣ್ಣಿನಲಿ ತಲೆಯೆತ್ತಿ ಮೈಗಣ್ಣಿನಾಸರವ-
ನರಸುತ್ತ ಮಾನವರು ನಡೆವರಿಲ್ಲಿ !

ಪ್ರೇಮವೆನಗಾರಾಧ್ಯವಿರಲದಕೆ ನೈವೇದ್ಯ-
ವಲ್ಲವೇ ನನ್ನಣುಗರೆಳೆಯ ನಗೆಯು ?
ಅವರ ಮೃದು ಮಧುರ ಧ್ವನಿಯಲ್ಲವೇ ಘನ ಮಂತ್ರ ?
ಇದನುಳಿದುಪಾಸನೆಯು ಯಾವ ಬಗೆಯು ?

ಆತ್ಮನೊಳಗಂಕುರಿಸಿ ಧ್ಯೇಯಮನದಲಿ ಕೊನರ್ತು
ಕಾಯಸ್ಥ ಕರ್ಮವಿರೆ ಕಳೆದುಂಬಿತು.
ಋಷಿಯ ದಿವ್ಯದೃಷ್ಟಿ, ಕವಿಯ ಕಾವ್ಯಸೃಷ್ಟಿ,
ಕಾದಲಳಮೃತವೃಷ್ಟಿಯಿದ ನಂಬಿತು

" ಪಂಚಪುತ್ರರ ಪಡೆದು ಬಂದೆ ಕುಂತಿಯ ಮನೆಗೆ ;
ನೂರು ಕೌರವರ ಗಾಂಧಾರಿಯಾಗು : "
ಎಂದಣಿಕಿಸಿದರಂದು ನನ್ನ ಗೆಳತಿಯರೆಲ್ಲ ;
ತಲೆವೇಸರಿಟ್ಟಿರುವದವರ ಸೋಗು,

ಹಗಲಿನಲಿ ನಸುಕಿನೆಳೆ ಬಣ್ಣಗಳನೆಳಸುವರು ;
ಹಗಲು ಮುಂಬರಿದಿರುವ ನಸುಕೆನುವರು ;
ನಸುಕಿನಲಿ ಮಿಡಿಯಾಗಿ ನಿಂತ ಬಿಸಿಲನು ಮಾತ್ರ
ಹಗಲಹಾಗಲಕಾಯಿ, ಕಹಿಯೆನುವರು.

ಬಂದ ಜ್ಯೋತಿಯ ತೊರೆದು ಬಾರದಿಹುದನು ಹುಡುಕಿ
ಧನ್ಯತೆಯ ಹೊಂದಿರುವರಾರು ತಿಳಿಯೆ ;
ವಿಶ್ವಚಕ್ರವು ಕೇಳ್ದ ತೆರಿಗೆಯನು ಪೂರೈಸಿ
ಮನೆಗೆ ನಡೆವರಿವೊಂದು ನನ್ನ ಬಳಿಗೆ !

ಸುಖಕೆ ಮೇಲ್ಬೀಳುವರು ನನ್ನ ಗೆಳತಿಯರೆಲ್ಲ ;
ಸುಖ ದುಃಖಗಳ ಭೇದವರಿದು ನನಗೆ.
ಒಂದು ಮಗು ಸುಖವೇನು? ಎರಡು ಮಗುಗಳು ಸುಖವೊ?
ಏನು ಮಗುವಿರದಿಹುದೆ ಸುಖವೊ ತಮಗೆ ?

ಬುದ್ಧಿವೈಭವಕೆಂದು ತಾಯ್ತನವ ಮೆಟ್ಟುವರು ;
ಬುದ್ಧಿಯೊಳಗಾವಮೃತ ಕಲಶವಿದೆಯೊ ?
ವಿದ್ಯೆಯಲ್ಲೇನಿಹುದು ? ಯಾವುದರಲೇನಿಹುದು ?
ಇಲ್ಲಿ ತೃಪ್ತಿಯ ಕಾಂಬುದಾವ ಎದೆಯೊ ?

ಮಕ್ಕಳೊಂದಿಗಳೆಂದು ಸುಖವಿಲ್ಲ, ನೋವಿಲ್ಲ ;
ಮಕ್ಕಳಿಲ್ಲದಳೆಂದು ಸುಖವದೆಂತು ?
ಇದು ನನ್ನ ಬಾಳ್ಮೆ ಮತ್ತವಳದದು ಬಾಳುವೆಯು ;
ಅಂತರವದೇನಿಲ್ಲ ನೋಡಲಿಂತು.

ಬಾಳ್ವಿಕೆಯ ಒಗಟಕ್ಕೆ ಬಾಳುವೆಯೆ ಉತ್ತರವು.
'ಎಂತಿರಲಿ ?' 'ನಿನ್ನಿರವು ಎಂತೊ ಅಂತೆ !'
ಇದ್ದುದಕೆ ಇಲ್ಲದರ ಕುಂದಣವ ಬಳಸದಿರು ;
ವಿದ್ಯೆ, ಸಂಪದ, ಬುದ್ಧಿ,— ಎಲ್ಲ ಕಂತೆ !

ಆತ್ಮವದು ವ್ಯೆಚಳಿಯ ಬಿಟ್ಟು ನಿಲ್ಲುವ ಮರವು ;
ಮಾಗಿಬಹ ದಾರಿಯನು ಕಾಯುತಿಹುದು.
ಸುಖದುಃಖಗಳ ಗಾಳಿ ಸೋಂಕಿದರೆ ಸೋಂಕುವದು ;
ತನ್ನ ಧ್ಯಾನದಿ ಮರವು ಮಾಯುತಿಹುದು.

ಜೀವನವನಾವ ಚಿನ್ನದ ಕವಚದಲಿ ಹೊಗಿಸಿ
ವಿದ್ಯೆಬುದ್ಧಿಗಳೊಡನೆ ಶೃಂಗರಿಸುತ
ಜೀವಕಳೆ ಕೊಡಬಹುದು ? ಕಂಡಾ ಕಳೇವರವ
ಸುರರು ತೆರಳುವರು ಕಂಬನಿ ಸುರಿಸುತ !

ಅದಕಂತೆ ತಿಳಿದಿಹೆನು ಬಾಳುವೆಯ ಪಥದಲ್ಲಿ
ಒಮ್ಮನದಿ ಮುಂಬರಿದು ನಡೆವುದೆಂದು.
ದಾರಿಯಲಿ ಹಿಗ್ಗಲಿಹ ಸ್ವಾನುಭೂತಿಯಲೆಲ್ಲ
ಜ್ಞಾನಸಂಪಾದನೆಯ ಪಡೆವುದೆಂದು.

ಕ್ರಿಸ್ತನ ಪುರಾಣದರ್ಣವ ಮಥಿಸುವದಕಿಂತ
ಕ್ರಿಸ್ತಮಾತೆಯ ಮೋದವಲ್ಲೆ ಮೇಲು ?
ಕೃಷ್ಣನನು ಸಲುಹಿದ ಯಶೋದೆಯಾ ಬಾಳುವೆಗೆ
ಯಾವ ಹವ್ಯಾಸವಿದೆ ? ಯಾವ ಸೋಲು ?

ಶಿಶುವಾಗಿ ನೋಟವನು ಸತಿಯಾಗಿ ಬೇಟವನು
ತಾಯ್ತನದಿ ಆಟವನು ಕಂಡು ಮುಂದೆ
ಎಲ್ಲ ನಿನ್ನಯ ಮಾಟವೆಂದರಿತು ಪದತಲದಿ
ನನ್ನ ಮುಡಿಯಿಟ್ಟಲ್ಲಿ ಮುಕ್ತಿ, ತಂದೆ !

---

## ೮. ತಂದೆ

ನೀನು ಹುಟ್ಟಿದ್ದೇಕೆ? ಸಲುಹಲಾರದೆ ನಾವು
ನೀನು ಬದುಕಿದ್ದೇಕೆ? ಎಂಬುದುಂಟು.
ಮನೆಯಲಿಹ ನಾಲ್ವರಿಗೆ, ನಾಡಿನಲಿ ನಲುವತ್ತು
ಕೋಟಿಗಿನ್ನೊಂದೆಂದು ನುಡಿಮುದುಂಟು.
ಅರ್ಥಹೀನನು ನಾನು; ಅನಪೇಕ್ಷಿತಳು ನೀನು
ಕಾಮಜೀವನ ತಾನು ತಿರುಳು-ದುಂಬಿ
ನಿನ್ನ ಪಡೆಯಿತು ಧರ್ಮಮೋಕ್ಷಕೆಡರಾಗುತ್ತ-
ಎಂದು ಕೊರಗಿದೆನಿಂದು ನಾನು ನಂಬಿ.

ಸುಖವು ಮೆಯ್ಯುಂಡಿರಲು ಅಸುಖ ಬರೆ ಕೈಕೊಡವಿ
ನಾ ಜುಗುಪ್ಸೆಯಲಿಂದು ನುಡಿದ ಮಾತು
ಅರ್ಥ ಸಟೆಯಿರಬಹುದು; ಅರ್ಥ ದಿಟವಿರಬಹುದು,
ಕಾಕದೃಷ್ಟಿಯ ದಾರಿಯಲ್ಲಿ ಹೂತು.
ಕಾಮವಾಸನೆ ದೇವ ಬಿತ್ತಿರುವ ಬೀಜವಿರೆ
ಅದರ ಬೆಳುವಣಿಗೆಯನು ತಡೆವುದೆಂತು?
ಯೋಗಿವರ ನಾನಲ್ಲ; ಮನ್ಮಥಪತಾಕೆಯನು
ಗೆಲ್ಲಲಾರದೆ ತೊಳಲುತಿರುವ ಜಂತು.

ಹಡೆದ ಮಕ್ಕಳ ಸುಖವ ನೋಡಲಿಂಬಿರದಾಗಿ
ಬರಿಯ ಬವಣೆಯ ನಿತ್ಯ ಕಟ್ಟಿಕೊಳಲು
ಪಡೆವುದೇಕವರನಿನ್ನೆಂದು ತಳಮಳಿಸಿದೆನು
ಶಸ್ತ್ರಕ್ರಿಯೆಗಳುಪಾಯ ಮನವ ಕೊಳಲು.
ಹುಟ್ಟುಗಳ ಹುಟ್ಟನ್ನೆ ಬಿಡಿಸಿದರೆ ತಪ್ಪೇನು?
ದೇವಸಂಕಲ್ಪವನು ಮೀರಿದಂತೆ

ಎಂತಾಗಬಹುದು ? ಮುಂದುಳಿದ ವೇಳೆಯನೆಲ್ಲ
ಕಳೆಯೆ ಧರ್ಮ–ವಿವೇಕ ತೋರಿದಂತೆ ?

ಏನದೇನೇ ಇರಲಿ. ನೀ ನಿಂದೆ ಬಳಿ ಸಾರಿ.
ನಿನ್ನ ಭಾಗ್ಯವನಿಲ್ಲಿ ಬ್ರಹ್ಮ ಬರೆದು
ಕಳುಹಿದನು. ಧಾರುಣಿಯು ಬೇವು–ಬೆಲ್ಲವನುಂಡು
ತಿಳಿವ ಪಡೆಯಲು ಬಂದೆ ಕಣ್ಣು ತೆರೆದು.
ಸಂಯಮವ ನೆರೆ ಹೀರಿ ಬರಿ ನಿರೋಧವ ಮೀರಿ
ಜನಿಸಿ ಬರೆ ನೀನು ಸಂಕಲ್ಪಿಸಿರಲು
ಅಡ್ಡಗಟ್ಟಲು ನಿನ್ನ ನಾನೆಷ್ಟರವನೆಂದೆ
ದೇವ ನಿನ್ನಯ ಹುಟ್ಟು ಕಲ್ಪಿಸಿರಲು

ಒಳಗೆ ಬಾ. ಇದು ನನ್ನ ಮನೆ. ಇಲ್ಲಿ ನಿನಗೊಂದು
ಸೆಜ್ಜೆವನೆ ಸಿದ್ಧವಾಗಿಹುದು ನೋಡು.
ಸಿದ್ಧರಿರುವೆವು ನಾವು ನಿನ್ನ ತಾಯ್ತಂದೆಗಳು
ನೋಡಿಕೊಳ್ಳಲು. ಏನು ಬೇಕು ಬೇಡು.
ನಮ್ಮ ದುಃಖವ ನುಂಗಿ ತೊಂದರೆಗಳನು ನೂಗಿ
ದೇವ ಹೊರಿಸಿದ ನಿನ್ನ ಹೊಣೆಯ ಹೊತ್ತು
ಜೀವ-ದೇಹವ ಸವೆಸಲಣಿಗೊಳಲು ನೋಂತಿಹೆವು.
ಅವನು ಸ್ಥೈರ್ಯವೆಂಬುದೇ ನಮ್ಮ ಸೊತ್ತು.

ನಿನ್ನ ತಂದೆಯ ವೀರ್ಯದಿಂದ ತಾಯಿಯ ಉದರ-
ದಿಂದ ಭೂದೇವಿಯಾ ತೊಡೆಯಲಿಳಿದು
ಒಡನೆ ರೋದನವೇಕೆ ಹಸುಳೆಜೀವವೆ, ಹೇಳು.
ಹುಟ್ಟು ಬಯಸದೆ ಬಂದೆಯೇನು ಮುಳಿದು ?
ಈ ಮಹಾಮೂರ್ಖರಾ ಕರ್ಮಭೂಮಿಯಲೇಕೆ
ನಿನಗೆ ಪಾತ್ರವಿದೆಂದು ರೋದಿಸಿವೆಯಾ ?

ಸುಖವೀ ಮಹೀತಳದಿ ಬರಿಮಾಯೆಯೆಂಬುದನು
ಮರುಳು-ನಗೆ ನಗುವಾಗ ಶೋಧಿಸಿದೆಯಾ ?

ಅಳಬೇಡ. ತಾಯಿ ತೊಟ್ಟಿಲ ಕಟ್ಟಿ ಜೋಗುಳವ
ಹಾಡಿ, ನಿನ್ನಯ ಬಾಳ ಬೆಳಗಿಸುವಳು ;
ಸುಖವಲ್ಲ ಬರಿ ಮಾಯೆ; ತನ್ನ ನಲುಮೆಯ ಹೊನಲ
ಹರಸುತದರಲಿ ನಿನ್ನ ಮುಳುಗಿಸುವಳು.
ಮತ್ತೆ ನಿನ್ನಯ ತಂದೆ ಬಾಳ ಬೇರನು ಹಿಡಿದು
ಮರವನಲ್ಲಾಡಿಸುತ ಸುರಿಸುತಿಹನು
ತನಿವಣ್ಣುಗಳನು; ಚಿರಂತನ ಸುಖದ ದಾರಿಯನು
ಕಂಡು ತೋರಿಸಲು ಕನವರಿಸುತಿಹನು.

ದೇವಪೂಜೆಯಲೆಂದು ತೇದ ಗಂಧದ ಕೊರಡು
ನಿನ್ನ ಕಾಪಿಡಲು ಸವೆಸಿದ್ದ ದೇಹ.
ನಿನ್ನ ಪೋಷಿಸಲು ಮುಂದೆ ಸಣ್ಣಗಾಗುವ ಜೀವ
ದಿವ್ಯ ನಂದಾದೀಪಕೆರೆದ ನೇಹ.
ಯಾವ ಖಣದಲಿ ನಾವು ನಿನ್ನನಿಡಬಯಸಿಲ್ಲ.
ನೀನು ಬೆಳೆವುದೆ ನಮ್ಮ ಕಣ್ಣುಪ್ರೀತಿ.
ನಿನ್ನ ಪಕ್ಕವು ಬಲಿತು ಹಾರಲಣಿಗೊಂಡಾಗ
ನಿನ್ನ ಹಾರಿಕೆ ನಿನಗೆ, ನಿನ್ನ ರೀತಿ.

ನಮ್ಮ ಸುಖ ಕಡಿಮೆಯಾಯ್ತೆಂದು ಕನಲಿಕೆಯಿಲ್ಲ.
ಇದ್ದ ಸುಖದಲ್ಲಿದಕೊ ! ನಿನ್ನ ಪಾಲು.
ನಮ್ಮ ದುಃಖದ ಸೆಕೆಯು ನಿನಗೆ ತಾಗಲು ಕ್ಷಮಿಸು
ದಕ್ಕಿರಲಿ ನಿನಗಿನ್ನು ತಾಯ ಹಾಲು.
ಮುನಿದಿರಲು ನಾನೊಮ್ಮೆ ದಂಡಿಸಲದಿನ್ನೊಮ್ಮೆ
ನನ್ನ ದುರ್ಬಲತೆಯದು. ಕೆರಳಬೇಡ.

ಮೋರೆಯಲಿ ಜಮದಗ್ನಿ ಕೋಪ ಪ್ರಜ್ವಲಿಸುತಿರೆ
ಎದೆಯಲಿಹ ಕೂರ್ಮೆಯನು ಮರೆಯಬೇಡ.

ದೇವ ಕರುಣೆಸೆ ನೀನು ಬಂದೆ ನಮ್ಮಯ ಮನೆಗೆ.
ಸಂಪ್ರೀತಿಗೊಡೆದ ಮಗುದೊಂದು ಟಿಸಿಲು
ನೀನಹುದು. ಶುಭವಿರಲಿ, ಹಸುಳೆ! ಮಂಗಳವಿರಲಿ
ನಮ್ಮೆದೆಯಲಾಡುತಿರೆ ನಿನ್ನ ಉಸಿರು.
ನಾಳೆ ನೀನು ಕುಮಾರಿ. ನಾಡಿದ್ದು ಸುಕುಮಾರಿ.
ನಿನ್ನೆಳೆತನದಿ ನಾವು ಎಳೆಯರಾಗಿ
ಪಡೆಯುವೆವು ಶೈಶವದ ಸ್ವಾನಂದ-ಸುಖಗಳನು
ನಮ್ಮ ಬಾಲ್ಯದ ನೆನಪು ಸುಳಿಯಲಾಗಿ.

ಒಂದೊಂದು ಹೊಸ ಹುಟ್ಟಿಗೊಮ್ಮೆ ಪಾವನರಾಗಿ
ಬಾಳಿಹೆವು ಬಾಳ್ಮೊದಲ ನೆನಸನುಂಡು.
ನಿನ್ನ ಮೋರೆಯಲೆಮ್ಮ ಗತಿಸಿದದ್ಭುತರಮ್ಯ
ಸ್ವರ್ಣಸ್ವಪ್ನದ ಪುನಃಪ್ರತ್ಯಯವ ಕಂಡು:
ನಿನ್ನ ದೈವದ ಗಂಟು ನಿನ್ನೊಡನೆ ತಂದಿರುವೆ.
ನಮ್ಮ ಮನೆಯುಲ್ಲದನು ಬಿಚ್ಚಿ ನೋಡು.
ಆಟಕೆಂದಿಳಿದಿಂದು ಧಾರುಣಿಗೆ ಬಂದಿರುವೆ.
ನಮ್ಮಂಗಳದಿ ಮೊದಲಿನಾಟವಾಡು!

## ೧. ಕನ್ನಡಿಗ

ಕರುನಾಡಿನಲ್ಲಿಹುದು ಜಾತಿಮತ್ಸರ, ದ್ವೇಷ,
ಯಾವವೀ ಕಲಹವಿಂದು :
ನಾಡಿನೆದೆಯಲಿ ಧರ್ಮ-ಮತಗಳ ಪೆಡಂಭೂತ
ಬೀಡು ಬಿಟ್ಟಿಹುದು ಬಂದು.
ಲಿಂಗವಂತರು, ಬ್ರಾಹ್ಮಣರು, ಜೈನರುಳಿದವರು,
ಚೀನ ಗೋಡೆಗಳ ಕಟ್ಟಿ-
ಬಾಳುವರು, ಹಿಂದೊಮ್ಮೆ ನೆಲಸಿದ್ದ ಸೌಹಾರ್ದ-
ಗಳನು ಹಿಂತುಳಿದು ಮೆಟ್ಟಿ.

ದೇಶದಲ್ಲಿಯೆ ತ್ವೇಷ, ದುಃಖ, ದೀನತೆ ಬಂದು
ಸಂಕೋಲೆಗಳನು ಹಾಕಿ,
ಭಾರತೀಯರು ನಾವು ಬಾಳುವೆವು, ತಾಯಿಯನು
ಪಾತಾಳದಲ್ಲಿ ನೂಕಿ.
ಹಿಂಸೆಯೆನುವರು ಕೆಲರಹಿಂಸೆಯೆಂದುಳಿದವರು ;
ಹಿಂದು-ಮುಸ್ಲೀಮ ತಂತ್ರ ;
ನಮ್ಮ ಕಡಿದಾಟವನು ಕಂಡಾಂಗ್ಲರೆನುತಿಹರು :
'ನಾವ್ ನಿಮಗೆ ಬೀಜಮಂತ್ರ'

ಇಳೆಯನಾವರಿಸಿಹವು ಪ್ರಳಯಾಗ್ನಿ, ವಿಷವಾಯು,
ರಕ್ಕಸರ ನ್ಯಾಯನೀತಿ ;
ಇನ್ನೆಂದಿಗೂ ಮುಗಿಯದಾಳರಸರಳವೆಂದು
ತಳವೂರಿತೊಂದು ಭೀತಿ.
ಹಿಮಶ್ವೇತ-ಘನಶ್ಯಾಮ, ಚಕ್ರವರ್ತಿ-ಗುಲಾಮ-
ರೆಂಬ ವಿಂಗಡಿಕೆ ಹುಟ್ಟಿ,
ಮಾನವರು ಮರೆತಿರುವರೊಂದೆ ಕುಲವೆಂಬುದನು
ಪಂಗಡಕೆ ಪಟ್ಟಗಟ್ಟಿ.

ಇತಿಹಾಸವೆಂದಿತ್ತದೆಂದೆಂದಿಗೂ ಹೀಗೆ
ಧಾರುಣಿಯ ದೈವವೆಂದು :
ಹೊಸ ಯುಗದ ಹೊಸ ಜಗದ ಚಾರಣನೆ ! ನೀನೋದು
ಹಿಂದಾದ ಕಥೆಯನೆಂದು.
ದೊಡ್ಡವರ ಹೆಸರಿನಲಿ ಸಣ್ಣವರು ಮಠ ಕಟ್ಟಿ
ಬಾಳುವರು ಸ್ವಾಮಿಯಾಗಿ :
ಮಾತಿನಲಿ ಸ್ವರ್ಗವನು ಕೃತಿಯಲ್ಲಿ ನರಕವನು,
ಹುದುಗಿಸುವ ಕಾಮಿಯಾಗಿ.

ಇಂದಿನೀ ಬಾಳಿಂತು ಅಗ್ನಿಕುಂಡದ ಮೇಲೆ
ತೂಗಿ ತೊನೆದಾಡಿದಂತೆ :
ನೀಗಲಾರದ ತೂಕವನ್ನು ಹೆಗಲಲಿ ಹೊತ್ತು
ವ್ಯರ್ಥ ಹೆಣಗಾಡಿದಂತೆ:
ನೂರು ಬೇನೆಗೆ ಬಳಲಿ ಹಪ್ಪುಪಾಲಾಗಿರುವ
ಹೆಣವ ಸಿಂಗರಿಸಿದಂತೆ ;
ಉಸುಬಿನುದಧಿಯಲೊಮ್ಮೆ ಹೊನ್ನಿನೊಲು ಹೊಳೆವಳಿದ
ಕಣವ ಹುಡುಕಾಡಿದಂತೆ.

ಇಡಿ ಧರಿತ್ರಿಯೆ ತಿರುಗಿ ನಿಲ್ಲಲೇನು ?
ಮಿಥ್ಯವೇನಿದೆ— ಮಿಥ್ಯ. ಸತ್ಯ— ಸತ್ಯ.
ಕಾಣದಿರಬಹುದಿಂದು ಲೋಕವಲ್ಲಿ,
ಮಿಥ್ಯವನು ಮುರಿದೊಗೆವ ಪಾದುಪತ್ಯ.

ಬಾಳುವೆನು ನಾ ಸತ್ಯದಾಳುಹೋಳಾಗಿ,
ಸತ್ಯಕ್ಕೆ ಗೆಲುವಿರಲಿ, ಇಲ್ಲದಿರಲಿ :—
ದೇವ ಕೈಯ್ಯಲಿ ಕೊಟ್ಟ ಬಿದಿರನಿದನು
ಹೆಜ್ಜಹಾಕುತ, ಮಾಡುತೊಂದು ಮುರಲಿ.

—————

## ೨. ಹಿಂದೂ ಭಾರತೀಯ

ದ್ರಾವಿಡರ ಮಂತ್ರ–ತಂತ್ರಗಳೊಡನೆ ಬೆರೆತವ್ಳೆ
ಆರ್ಯಕುಲ ಮುನಿವರರ ವೇದಘೋಷ.
ದ್ರಾವಿಡರ ಮೈಕಟ್ಟನೊಡನೆ ಒಂದಾಯಿತ್ತೈ
ಆರ್ಯಕುಲದೀಪಕರ ಅತುಲ ಶೌರ್ಯ.
ಸಂಸ್ಕೃತಿಗಳೆರಡಿಂತು ಮೆರೆಯೆ ಸಂಗಮವಾಗಿ
ಮೊಳೆವ ರಾಜ್ಯಕೆ ಮೇರೆಯೆಳೆವರಾರು?
ದೇಹಬಲ; ಬುದ್ಧಿಬಲ; ಆತ್ಮಬಲ: ಇವುಗಳಲಿ
ಭರತವರ್ಷವನು ಹೀಗಳೆವರಾರು?
ಅದರ ಧರ್ಮದ ಮಹಿಮೆ, ಅದರ ಕರ್ಮದ ಹಿರಿಮೆ,–
ಇದರ ಕೀರ್ತಿಯನಲ್ಲಗಳೆವರಾರು?

ಚಂದ್ರವಂಶಜರಿತ್ತ ರತುನಮಾಣಿಕ್ಯಗಳ
ವೈಭವವನೊಳಗೊಂಡ ಭುಜಕಿರೀಟ;
ಸೂರ್ಯವಂಶಜರೆಲ್ಲ ಮೂಲಪುರುಷನನೊಲಿಸಿ
ನಮ್ಮ ಲೋಕಕೆ ತಂದ ಮುಕುಟಮಣಿಯು;
ಜಾನಕಿಯು ಆರತಿಯ ಬೆಳಗಿ ಹಚ್ಚಿದ ತಿಲಕ;
ದ್ರೌಪದಿಯು ಕೊರಳೊಳಿರಿಸಿದ ರತ್ನಹಾರ;
ದೇವ ತಾನಾಗಿತ್ತ ಭವ್ಯ–ದಿವ್ಯ ದೃಷ್ಟಿ: —
ಮಿಕ್ಕಲೀ ಸಿಂಗಾರ, ನಡೆದ ಸುಕುಮಾರ!
ಆರ್ಯ–ದ್ರಾವಿಡ ಕುಲಗಳನ್ನು ಮೇಳವಿಸುತ್ತ
ಮುನ್ನಡೆದ ಭಾರತದ ವೀರ–ಧೀರ!

ವಿಶ್ವವನೆ ಚಿತ್ರಿಸಿದ ಮೊದಲುಬೆಳಕಿನ ಪ್ರಭೆಯು
ತುಂಬಿ ಹೊರಹೊಮ್ಮಿತ್ತೈ ಅವನ ಜೀವನದಿ!
ಉಪನಿಷದ್ವೇದಗಳು ಉಂಡ ನನಸಾಗಿರಲು

ಭಾರತಕೆ ಬಂದಿತ್ತು ವಿಮಲ ಕೀರ್ತಿ !
ಆರ್ಷದೃಷ್ಟಿಯು ಬಲವು, ಯೋಗ-ಭೋಗದ ಒಲವು,
ಭರತವರ್ಷದ ಹಿರಿಯ ನಾಡಿನಲ್ಲಿ, —
ಏಳುತ್ತ ಬೆಳಗುತ್ತ ತೇಲುತ್ತ ತೊಳಗುತ್ತ
ನೆಲಸಿದವು ಆ ಸುಖದ ಬೀಡಿನಲ್ಲಿ.
ಕಲ್ಪವೃಕ್ಷದ ಹಣ್ಣು-ಕಾಯಿ ನೇತಾಡಿದವು
ಭರತವಂಶಜರ ಕೈಪಾಡಿನಲ್ಲಿ !

ಉದಯಕಾಲದಲೆದ್ದು ಕಾವೇರಿ-ಗಂಗೆಯರ
ಹೊನಲಿನಲಿ ಮಿಂದತಿ ಪವಿತ್ರರಾಗಿ
ಎಲ್ಲ ಋಷಿಪುಂಗವರು ಕೈಮುಗಿದು ನಿಂತಿರಲು
ಹೊಳೆದೆದುರು ಬಂದಿಹಳು ಭರತಮಾತೆ !
ಮಾಲಕುಮಿಗಿಹ ಚೆಲುವು, ಸರಸತಿಯು ಹಿರಿಯೊಲವು,
ಮಾಹೇಶ್ವರಿಗೆ ನಿತ್ಯವಿರುವ ಗೆಲುವು,
ಮತ್ತಾ ಮಹಾಕಾಳಿಗಿರುವ ಕ್ರಾಂತಿಯ ಕಳೆಯು :
ಇವು ಮೂರ್ತಿಮಂತವಿರೆ ಬರುವ ನಲಿವು
ನಾಡ ಮಾದೇವಿಗಿರೆ,— ಆವಳ ವಚನವೆ ಮಂತ್ರ !
ಆವಳೊಂದು ದರ್ಶನವೆ ದಿವ್ಯ ಬಲವು !

ಬೇರೆ ಕಾಲವು ಬಂತು. ವರ್ಣಾಶ್ರಮದಿ ಘನತೆ-
ಗೇರಿದಂತಹ ಸನಾತನರ ಧರ್ಮ;
ವೀರಾಧಿವೀರರಿರಲಂದು ಜನನಾಯಕರು
ಭಾರತೀಯರು ತೋರಿದತುಲ ಶೌರ್ಯ;
ಚಂದ್ರಿಕೆಯ ತೆರದಿ ಶಾಂತಿಯ ರಾಜ್ಯ ಹಬ್ಬಿರಲು
ಚಂದ್ರನನು ಮುಟ್ಟಿದ್ದ ಮುದ್ದು ಮನವು :
ಇವುಗಳೆಲ್ಲವು ಕಳೆಯೆ ಅನ್ಯರಾಳಿಕೆಯಲ್ಲಿ
ನಮ್ಮ ಮನವಾಗಬಹುದೆಂತು ಘನವು ?
ನರಕಯಾತನೆಯಲ್ಲಿ ಜೀವ ಹೋರಾಡಿತ್ತು
ಆರ್ಯಮಾತೆಗೆ ಬರಲು ದೀನತನವು !

ಆಗ ಕಂಡರು ಕೆಲವು ಸಾಹಸಿಗಳಲ್ಲಲ್ಲಿ
ಮೌರ್ಯಕುಲದವರ ಶೌರ್ಯವನು ತೋರಿ.
ಎದ್ದ ಮಾಧವಮುನಿಯು ಹುಕ್ಕ-ಬುಕ್ಕರ ಕೂಡಿ,
ಕನ್ನಡಿಗರ್ಸೈಸಿರಿಯು ಸೊಬಗ ಸಾರಿ !
ಅಂಜುವವರನ್ನೆ ಅಂಜಿಸಬರುವದಿದು ಸಾವು !
ಸಾವನ್ನು ಮೆಟ್ಟಿದರಿಗೆಲ್ಲಿ ಮರಣ ?
ವೀರ ಕೇಸರಿ ಶಿವಾಜಿಯು ಹುಟ್ಟಿ ಬಂದನ್ನೈ, —
ತಾಯ್ನಾಡಿಗಿನ್ನೊಂದು ಬೆಳಕಿನಾಭರಣ !
ಇಂತೀ ವಿಭೂತಿಗಳು ಬರಲು ಸಂಚರಿಸಿತ್ತೈ
ನಾಡಿನೆದೆಯಲ್ಲೊಂದು ದಿವ್ಯ ಸ್ಫುರಣ !

ತಾಯಿ ! ನಿನಗೆಂದಿವರು ದುರ್ಗಗಳ ಕಟ್ಟಿದರು.
ದೇಗುಲಗಳಂದವನು ನಿರ್ಮಿಸಿದರು.
ದೂರ ದೂರದ ಶಿಲ್ಪಿಗಳು ಬಂದು ಕಲ್ಲಿನಲಿ.
ತಮ್ಮ ಸವಿಗನಸುಗಳ ಮೂಡಿಸಿದರು.
ಆದರಾ ನಿನ್ನೊಲುಮೆ ಚಿರಕಾಲವಿರಲಿಲ್ಲ.
ಕನಸು ನನಸಾಗಿ ತಾನುಳಿಯಲಿಲ್ಲ !
ಯಾವ ದೈವವು ನುಂಗಿ ನೀರು ಕುಡಿಯಿತೊ ಏನೊ !
ಸಾಮ್ರಾಜ್ಯವದು ಮುಂದೆ ಬಾಳಲಿಲ್ಲ.
ನೀಚರನಿಬರ ನೋಡಿ ತಾರೆಗಳ ಶಿಬಿರವನು
ಬಿಟ್ಟಿಳಿದು ನೀನಿಲ್ಲಿ ಬರಲೆ ಇಲ್ಲ !

ಆದರೀ ಮನ್ವಂತರದ ರೋಗ ಬೇರೆಯಿದೆ.
ಯಾವ ಧನ್ವಂತರಿಯು ಬರುವ, ಕಾಣೆ !
ಹಳತೆಲ್ಲ ಹಳಸಿಹುದು; ಹೊಸತೆಲ್ಲ ಕಸುಕಿಹುದು;
ಯುಗಾಂತರವು ಬರುವನಕ ತಪ್ಪದಿದು ಬವಣೆ !
ಸಾವಾದರೂ ಬರಲಿ ! ನೋವಾದರೂ ಬರಲಿ !
ಸತ್ತ ಮೇಲ್ ನರಕದುರಿಯೆಸಕ ಬರಲಿ !
ಅಳಿದರೇನುಳಿದರೇನೀ ಜಗದಿ, ಈ ಯುಗದಿ ?

ಆರ್ಯಮಾತೆಗೆ ಮಾತ್ರ ಕ್ಷೇಮವಿರಲಿ !
ಪುಗ್ಧರನು ಹೋಮಿಸುತ ದೇಶದಲಿ ಕ್ಷಾಮವನು
ತಂದವರ ಸಾಕ್ಷಿಗಾ ವ್ಯೋಮವಿರಲಿ !

ನಕ್ಷತ್ರಗಳ ರಾಜ್ಯದಲ್ಲಿ ನೆಲಿಸಿಹ ತಾಯಿ
ಭಿಕ್ಷುಕಿಯ ವೇಷವನ್ನಿಂದು ತಳೆದಿಹಳು.
ಆರ್ಯರೆಲ್ಲರು ತಮ್ಮ ಔದಾರ್ಯವನು ತೋರ್ವು-
ದೆಂದೆನುತ ಮನೆಮನೆಯ ತಿರುಗುತಿಹಳು ;
ದೇಹವತಿ ಸವೆದಿರಲು ನಾರುಬಟ್ಟೆಯನುಟ್ಟು,
ಕಣ್ಣೀರು ಪಳದಳನೆ ಸುರಿಯುತಿರಲು ;
ಕೈಯ್ಯಲಿಹ ಕಿನ್ನರಿಯು ಬಿಸುಸುಯ್ವ ದನಿಯೊಡನೆ
ಗತ ಧರ್ಮ–ಕರ್ಮಗಳ ನೆನೆಯುತಿರಲು ;
ಪರರಂತೆ ವರ್ತಿಸುವ ತನ್ನ ಮಕ್ಕಳ ನೋಡಿ
ಹೃದಯದಲಿ ಶೋಕಾಗ್ನಿ ಜ್ವಲಿಸುತಿರಲು !

ದೇವದೇವನ ಲೀಲೆಗಳನು ನುತಿಸುವ ದೇವಿ, –
ಅವಳ ನುಡಿಗೀ ನಾಡು ಏಳುತಿಹುದು.
ಆಭರಣವಾಗುತ್ತ ರವಿಕಿರಣ ಮೆರೆದಿಹವು.
ಕತ್ತಲೆಯ ತೆರೆಯು ಮರೆಯಾಗುತಿಹುದು.
ಕೇಳಿ ಬರೆ ವೇದಕಾಲದ ಮಂತ್ರಗಳ ಘೋಷ,
ಹೋದ ಕನಸುಗಳೆಲ್ಲ ಮರಳುತಿಹವು.
ದೂರ ನಭದಲಿ ಇಂದ್ರನಮರಾವತಿಯ ದ್ವಾರ-
ಗಳು ತಳೆದರುಣಪ್ರಭೆಯ, ಬೆಳಗುತಿಹವು.
ಋಷಿವರ್ಯರುದಿಸಿ ನುಡಿದಿಹ ದಿವ್ಯ ಗಾನಗಳು
ಸ್ವಾತಂತ್ರ್ಯದುದಯವನು ಸಾರುತಿಹವು.

ಈ ನಮ್ಮ ಹಬ್ಬದಲಿ ಉಬ್ಬದಿರುವವರುಂಟೆ ?
ಮತ್ತರನು ಉನ್ಮತ್ತರಾಗಿ ಮೆಟ್ಟಿ
ಹಾರದಿರುವವರುಂಟೆ ? ತೂರದಿರುವವರುಂಟೆ ?

ಬಾರಿಸಿರಿ ಕಾಳಗದ ಕಡೆಯ ಗಂಟೆ !
ಮನವಿಲ್ಲದವರಿರಲಿ ! ಬಂದವರು ತಾವ್ ಬರಲಿ !
ನಮ್ಮ ಸ್ವಾತಂತ್ರ್ಯಲೀಲೆಯನು ನೋಡು
ವಿಶ್ವಕರ್ಮನೆ ! ವಿಶ್ವವಿಶ್ವದಲಿ ಕಂಡಿಲ್ಲ !
ಹೊಸತೊಂದು ಲೋಕವನು ರಚಿಸು ! ಓಡು !
ಕವಿಪುಂಗವರೆ ! ಇದುವೆ ನಿಮ್ಮ ಸುಗ್ಗಿಯ ಕಾಲ !
ಹೊರಹೊಮ್ಮುತೈತರಲಿ ನಿಮ್ಮ ಹಾಡು !

ಇನ್ನುಳಿದ ಮಾತೇಕೆ ? ಬಾರೆ ! ಭಾರತಮಾತೆ !
ವೀರರಕ್ತೋಹಿಣಿಗೆ ಜನ್ಮದಾತೆ !
ಬುದ್ಧನಂತಹ ಜ್ಞಾನಿ, ರಾಮನಂತಹ ಮಾನಿ—
ಗಳನು ನೀ ಪಡೆದೆಯೌ, ಲೋಕವಿಖ್ಯಾತೆ !
ಆರ್ಯತತ್ವದ ಮೂಲವನ್ನರಿತ ಗೋಪಾಲ-
ನನ್ನು ಹೆತ್ತಂಥ ಗುಣಗಣವಿನೂತೆ !
ಉಪನಿಷದ್ವೇದಗಳು; – ನಿನ್ನಣುಗರಾಪುತಿಹ
ಬಳಕೆವಾತಿನಲಡಕವಾದ ಗೀತೆ !
ಹಿಂದಿದ್ದೆ; ಇಂದಿರುವೆ; ಇನ್ನು ಮುಂದುಳಿದಿರುವೆ ;
ಅಹುವಹುದು ! ಎಂದಿಗೂ ಆರ್ಯಮಾತೆ !

ನಮ್ಮ ತಾಯ್ನಾಡಿದುವೆ ! ನಮ್ಮ ಸ್ವರ್ಲೋಕವಿದು !
ಆರ್ಯಕುಲಶೀಲದಾ ತವರುಮನೆಯು !
ಆರ್ಯತತ್ವಗಳನ್ನು ಬಿಡದೆ ಪಾಲಿಸಲೆಂದು
ದೇವ ಕಲ್ಪಿಸಿಕೊಟ್ಟ ಮುತ್ತಿನರಮನೆಯು !
ಇಸ್ಲಾಮಧರ್ಮದನುಯಾಯಿಗಳ ರಕ್ಷಿಸಲು
ಬೆಟ್ಟಗಳ ಮೇಲೆ ಕಾಬೂಲವಿಹುದು :
ಪಡುವಣದ ಉಡುಗಣದಿ ಸ್ಥಾನವದಕೊಂದಿಹುದು,
ಓಮರನ ನಂದನವಿರಾಣವಿಹುದು :
ನಮಗಾರ್ಯಮಾತೆಯೊರ್ವಳೆ ! ಅವಳಿಗಾಗಿ ಈ
ದೇಹಪಂಜರದಲ್ಲಿ ಜೀವವಿಹುದು !

೧೯೩೦

## ೭. ಕ್ರಾಂತಿಕಾರ

ಏಳು ಏಳವ್ವ,
ಭಾರತದ ಜನನಿ !
ಏಳು ಏಳವ್ವ,
ದರಿದ್ರನಾರಾಯಣಿ !
ಏಳು ಏಳವ್ವ !
ನಿದ್ರೆ ತಿಳಿದೇಳು !
ನೋಡು ನೋಡವ್ವ
ಬಾಳುಗಳ ಬೀಳು !
ಭಾರತದ ರಮಣಿ !
ಜಗದ ಮುಕುಟಮಣಿ !
ಏಳಿನ್ನು ! ಏಳು ! ಏಳು !

ಏಳು ಏಳವ್ವ !
ಭಾರತದ ಜನನಿ !
ದುರ್ಭಾಗ್ಯ ಜನತೆಗಿಹ
ಚೆಲುವ ಮನಮೋಹಿನಿ !
ಏಳು ಏಳವ್ವ !
ಕಣ್ದೆರೆದು ನೋಡು !
ನಿನ್ನ ನಾಡಾಗಿಹುದು
ರಕ್ಕಸರ ಬೀಡು !
ಜನದ ಭುವನೇಶ್ವರಿ !
ಮನದ ಮಾಹೇಶ್ವರಿ !
ಏಳಿನ್ನು ! ಏಳು ! ಏಳು !

ಇನ್ನೆನಿತು ಯುಗಗಳನು
ಕಳೆವೆ ನಿದ್ರೆಯಲಿ?
ಇನ್ನೆನಿತು ತಾಪಗಳ
ತಳೆವೆ ಮುದ್ರೆಯಲಿ?
ನಿನ್ನ ಹಸುಮಕ್ಕಳನು
ಹಸಿಬಿಸಿಯೆ ತಿಂದು
ನಿನ್ನ ಸುಕುಮಾರಿಯರ
ರಕ್ತದಲಿ ಮಿಂದು
ಬಂದಿಹರು ನೋಡು!
ನೋಡೆಮ್ಮ ಪಾಡು!
ಏಳಿನ್ನು! ಏಳು! ಏಳು!

ನಮ್ಮನೆಲ್ಲರ ಹಡೆದು
ಹಡೆದವ್ವ! ಹೋದೆ!
ನಮ್ಮ ದನಿ ಕೇಳಿಯೂ
ನೀ ಕಾಣದಾದೆ!
ಕುಲದ ಹೆಂಗಳೆಯರನು
ಕುಲಗೆಡಿಸಿ ನಿಂತು
ಭಾರತೀಯರ ಭರತ
ಕುಲ ಸುಟ್ಟು ಬಂತು
ರಕ್ಕಸರ ದಂಡು!
ಅಕ್ಕಸದ ಹಿಂಡು!
ಏಳಿನ್ನು! ಏಳು! ಏಳು!

ಧೀರರಗ್ರೇಸರರ
ಪಡೆದಿರುವ ರಮಣಿ!
ವೀರಪುತ್ರರ ತಾಯಿ!

ಜಗದ ಮುಕುಟಮಣಿ !
ನಮ್ಮಂಥ ಹೇಡಿಗಳ-
ನುದರದಲಿ ಹೊತ್ತು !
ಬಿಸುಟೊಗೆವ ಬಸಿರಿಗೀ
ನಿನ್ನುಸಿರನಿತ್ತು
ಬಂದಿತೀ ಹೊತ್ತು !
ತಂದಿತೀ ಕುತ್ತು !
ಏಳಿನ್ನು ! ಏಳು ! ಏಳು !

ದ್ರುಪದನಂದನೆಯಾಗಿ
ದುಃಖ ಭೋಗಿಸಿದೆ.
ವೈದೇಹಿಯಾಗಿ ವನ-
ವಾಸ ನೀಗಿಸಿದೆ.
ಆರ್ಯಮಾತೆಯೆ ! ಯವನ
ರಾಜ್ಯದಲಿ ನೊಂದೆ !
ಭಾರತಿಯೆ ! ಇಂದು ನೀ
ಸೆರೆಯಲ್ಲಿ ನಿಂದೆ !
ಅಲ್ಲವಿದು ಬಾಳು !
ಏತಕಿದು ಗೋಳು ?
ಏಳಿನ್ನು ! ಏಳು ! ಏಳು !

ಸೂರೆಗೆಯ್ದರು ನಿನ್ನ
ಸಂಪದವನೆಲ್ಲ !
ಸುಟ್ಟುಬಿಟ್ಟರು ನಿನ್ನ
ರಾಜ್ಯಗಳನೆಲ್ಲ !
ನಿನ್ನ ವೈಭವ ಹೋಯ್ತು
ಕಾಡನ್ನು ಕೂಡಿ !

ಮ್ಲೇಂಛರಿಗೆ ನಿನ್ನಾಳ್ವ
ಬಲವನ್ನು ನೀಡಿ!
ನೋಡು ಈ ಗತಿಯ!
ನಮ್ಮ ದುರ್ಗತಿಯ!
ಏಳಿನ್ನು! ಏಳು! ಏಳು!

ಅಹಿರಾವಣನ ಸಾವು
ಲಕ್ಷ್ಮಣನಿಗರಿದು!
ಮಹಿರಾವಣನ ಮರಣ
ರಘುರಾಮಗರಿದು!
ತ್ರಿಭುವನೇಶ್ವರಿ! ಆಗು
ನೀ ಶಸ್ತ್ರಪಾಣಿ!
ಸಾಮ್ರಾಜ್ಯಗಳ ನುಂಗಿ
ನೀರ್ಕುಡಿವ ರಾಣಿ!
ನಿನ್ನ ಕೆಂಗಣ್ಣು
ಶಂಕರಿಯ ಕಣ್ಣು!
ಏಳಿನ್ನು! ಏಳು! ಏಳು!

ಸ್ವರ್ಗದಲಿ ದುರ್ಗದಲಿ
ವಾಸಿಸುವ ರುದ್ರೆ!
ಇಳಿದು ಬಾ! ಏಸು ದಿನ
ಬೇಸರವು, ಭದ್ರೆ!
ನೆತ್ತರದ ನದಿಗಳ
ಮಹಾಪೂರ ಬರಲಿ!
ರುಂಡಗಳ ಚೆಂಡುಮ-
ಲ್ಲಿಗೆ-ಮಾಲೆಯುರುಳಿ!
ಶಕ್ತಿ! ಬಾ ಇನ್ನು!

ಇದೆ ಮುಕ್ತಿಯೆನ್ನು !
ಏಳಿನ್ನು ! ಏಳು ! ಏಳು !

ಆದಿಮಾಯೆಯೆ ! ತೋರು
ನಿನ್ನಾದಿಮಾಯೆ !
ಭಾರತಿಯೆ ! ಭಾರತೀ-
ಯರನೆಲ್ಲ ಕಾಯೆ !
ಸಾಕಿನ್ನು ಸಾತ್ವಿಕ ಶಿ-
ರೋಮಣಿಯ ನೋವು !
ಬೇಕು ಬವರದಿ ಸವರಿ
ನುಗ್ಗುತಿಹ ಸಾವು !
ತೆಗೆಯಾ ತ್ರಿಶೂಲ !
ಶೂಲಕ್ಕೆ ಶೂಲ !
ಏಳಿನ್ನು ! ಏಳು ! ಏಳು !

ಎಲ್ಲ ಸೌಂದರ್ಯಕ್ಕೆ
ಉಗಮವಿಹ ದೇವಿ !
ಭುವನದೈಸಿರಿ ನೀನು
ಕರುಣಿಸಿದ ಠೀವಿ !
ಘೋರರೂಪಿಣಿ ! ನಿನ್ನ
ಎದುರಿಸುವರಾರು ?
ವಿಶ್ವವಾಹಿನಿ ! ನಿನ್ನ
ಅರಿಯದವರಾರು !
ಸ್ವಾತಂತ್ರ್ಯದರಸಿ !
ದಯೆಯು ಬದಿಗಿರಿಸಿ
ಏಳಿನ್ನು ! ಏಳು ! ಏಳು !

ಕ್ರಾಂತಿಯುಗ ಹೊಳೆದೊಮ್ಮೆ
ಭ್ರಾಂತರಲಿ ನಡಲಿ !
ಸ್ವಾತಂತ್ರ್ಯದುಂದುಭಿ
ಇದೋ ! ಮೊಳಗಿ ಬಿಡಲಿ !
ನಿನ್ನ ಕಂಗಳು ಗೆಯ್ದ
ಒಂದೊಂದು ಸನ್ನೆ
ಒಂದೊಂದು ಕ್ರಾಂತಿಯದು !
ಕೇಳು ! ಓ ರನ್ನೆ !
ಕ್ರಾಂತಿಗಳ ರಾಣಿ !
ಹೇ ಶಸ್ತ್ರಪಾಣಿ !
ಏಳಿನ್ನು ! ಏಳು ! ಏಳು !

ಸೌಂದರ್ಯದುಗಮವಿಹ
ಧಿವ್ಯ ಭುವನೇಶ್ವರಿ !
ಆಗಿನ್ನು ನೀನೊಮ್ಮೆ
ಉಗ್ರ ದುರ್ಗೇಶ್ವರಿ !
ಸುಟ್ಟು ಬಿಡು ಗೋಲಗಳ !
ಮೆಟ್ಟು ಪಾತಾಲಗಳ !
ಮತ್ತೆ ಜಾನಕಿಯಾಗಿ
ರಾಮರಾಜ್ಯವನಾಳು !
ಮತ್ತೆ ಮೋಹನ ಮೂರ್ತಿ,
ಶಾಂತಿಪಾಠವ ಹೇಳು !
ಈಗೊಮ್ಮೆ ಕಣ್ಣು ತೆರೆ
ದುರ್ಗೆಯಾಗುತ, ನೀರೆ!
ಏಳಿನ್ನು ! ಏಳು ! ಏಳು !

———

೧೯೩೦

## ೪. ತ್ಯಾಗಿ

ಮರೆಯಾಗಿ ಮುಗಿದಿರಲು
ರಾಜಕಲ್ಪನೆಯು
ಬರಿದಾಗಿ ನಿಂತಿರುವ-
ದಿದಕೋ! ಅರಮನೆಯು.
ತೋಟದಲ್ಲಿಲ್ಲವಂ-
ದಿಡಿದ ಸೌರಭವು;
ಇಲ್ಲವೆಣ್ದೆಸೆಗಳಲ್-
ಲೆಸೆದ ವೈಭವವು.
ಮೇಲ್ವರಿದು ಬರುವ ಸಿರಿ-
ಗಡಲಿನಂತೆ,
ಎಳೆಯನಿರೆ ಪೊರೆದ ತಾಯ್-
ಮಡಲಿನಂತೆ,—
ಬೇರೊಂದು ದೈವವೆನ್ನಾವರಿಸುತಿಹುದು ;
ಇನ್ನೊಂದು ಕೈಯೆನ್ನ ನೇವರಿಸುತಿಹುದು.

ರಾಣಿ ಪದಕೆರಗಿರಲು
ಬಹುದೆಂತು ಕರುಣೆ ?
ಸುತರು ತಡೆಯುವದೆನಲು,
ಮನಕೆ ವಿಸ್ಮರಣೆ !
ನೃಪತಿಗಳು ಕೈಮುಗಿಯೆ
ಕಾಲ್‌ಚೀಳ್ಪುದೆಂದು,
ಕವಿವೃಂದ ಬಕ್ಕೆ ನುಡಿಯಿ-
ರಿಂದ್ರ ನಾನೆಂದು
ಮೆರೆದುಂಡೆ. ಇಂದಿಗೋ!

ಕನಸಿನಂತೆ
ತ್ಯಜಿಸಿರುವೆನ್ನೈಸಿರಿಯ,
ಮುನಿಸಿನಂತೆ.
ನನ್ನವರು ಮೊರೆದಾಗ ಬರಲಿಲ್ಲ ಸಲುಮೆ.
ಕೈಯ್ಯಲಿರೆ ಕಪ್ಪರವು, ಕೊನೆಯುವದು ಒಲುಮೆ !

ಓಲಗವ ತೊರೆದೆನ್ನೈ ;
ರಾಣಿವಾಸವನು
ಬಿಟ್ಟೆನಿದೋ ; ಕೊಟ್ಟೆಸಿದೊ
ನಿಧಿನಿವಾಸವನು.
ಪಾಮರನು, ನನಗೇಕೆ
ಅಮರತೆಯ ಸೋಗು ?
ಪಾಪಜೀವಿಗದೇಕೆ
ಜಗದಾಗುಹೋಗು ?
ಮುಗಿದಿರಲಿ ಬಾಳುವೆಯು
ಮುಳುಗಿನಂತೆ.
ಒಸಗೆ ಹೋಯಿತು ಹಿಂದೆ
ಬೆಳಗಿನಂತೆ.
ಮುಗಿಲ ಬಸಿರಲಿ ತುಂಬಿ ಬಂದೆ ಮಳೆಯಂತೆ
ಈಗಿದೋ ! ನಿಂತಿಹೆನು ಬಿದಿರ ಮೆಳೆಯಂತೆ !

ರಾಜಭುವನದಿ ನನ್ನ
ಮುಟ್ಟದಿಹ ಮಂಜೆ !
ನಿನ್ನನಪ್ಪುವೆನಿಂದು.
ಸತ್ಯವದು ನಂಜೆ ?
ನಿಜ ಕಿರೀಟವು ಕಾಯ್ತು
ತಲೆಯಿದುವೆ, ಹಗಲೆ !

ಸಾರ್ವಭೌಮರ ಬಾಳು
ನಿನಗಿಂತ ಮಿಗಿಲೆ?
ಇನ್ನು ಆಂಡಲೆಯುವೆನು
ಕಾಲದಂತೆ;
ಇನ್ನು ಅನುಭವಿಸುವೆನು
ದೈವದಂತೆ.
ಸಿಂಪೊಡೆದ ಮೌಕ್ತಿಕವದೆಲ್ಲಿದ್ದರೇನು?
ಮಣ್ಣಿನಲಿ ಸಹ ಬಿಮ್ಮನೊರಗಿಹುದು ತಾನು.

ಕಟ್ಟಡವಿಯಲಿ ಬಾಳ್ವಿ
ತಪಕಿಳಿದು ಕುಳಿತು;
ದೇಹವಳಿದಿರಲಲ್ಲೆ
ಕುಳಿತಲ್ಲೆ ಹುಳಿತು;
ಮನವು ಮುಗಿದಿರಲಲ್ಲೆ
ಚಿದ್ಘನದಿ ಬೆರೆತು;
ಮೆಯ್ಯ ಕೀಳಾಸೆಗಳ
ಮೂಲವನೆ ಮರೆತು.
ಆತ್ಮವೇಳಲಿ ಚಕ್ರ-
ವರ್ತಿಯಾಗಿ;
ಶೂನ್ಯಸಿಂಹಾಸನದ
ಮೂರ್ತಿಯಾಗಿ.
ಅರಳಿರುವ ರಾಜ್ಯವಹುದಿದು ತ್ಯಾಜ್ಯವೆಂದೆ.
ಇನ್ನಾಳಿದರೆ ಮುಕ್ತಿಸಾಮ್ರಾಜ್ಯವೆಂದೆ!

## ೫. ದಾನಿ

೧

ದಾನದಂಥ ಪುಣ್ಯವಿಲ್ಲ ;
ದಾನಿಯಂಥ ಮೌನಿಯಿಲ್ಲ-
ವೆಂಬುದರಿತೆ ನಿನ್ನ ದಿನದ ಬಾಳ ನಿರಿಕಿಸಿ.
ಬಂದ್ಯೆಸಿರಿ ಮಹಾಪೂರ :
ಅದಕೆ ದಾರಿಮಾಡಿಕೊಡುವ
ನೆಲವು ನೀನದೆಂಬ ನಿನ್ನ ನಂಬುಗೆಯನು ಪರಿಕಿಸಿ.

ನಿನ್ನ ಮನೆಯು ಧರ್ಮಶಾಲೆ ;
ದೇವನದರ ಒಡೆಯನೆಂದೆ ;
ನೀ-ನಿನ್ನವರೂಳಿಗದಾಳೆಂದೆ ನಿತ್ಯವು.
ಅಭ್ಯಾಗತರೆಲ್ಲ ದೇವ-
ನತಿಥಿಗಳೆಂದಾದರಿಸಿದೆ
ಸುರಮುನಿಗಳು ಹಿಗ್ಗುವೊಲಿರಲಾತಿಥ್ಯವು.

ಬಡಬಗ್ಗರಿಗವಧಾನಿಯು ;
ಧೂರ್ತರೆದುರಿಸಲು ಮಾರಿಯು;
ಸತ್ಯಧರ್ಮದಭಿಮಾನಿಯು ನಿನಗಾರೈ ಸರಿಯು ?
ಸತ್ಪಾತ್ರವನರಿತೆ ನೀನು
ನಿನ್ನನು ಸುತ್ತಿದ ಸಂದಣಿ-
ಯನು ಭೇದಿಸಿ ನಡೆದಲ್ಲಿಗೆ ಹಿಂಬಾಲಿಸೆ ಸಿರಿಯು.

ಮಹಡಿಯ ಮೇಲಿಂದೊಂದಿನ
ನೀನು ಮುಗಿಲ ನೋಡುತಿರಲು
ದೂರ ಕಾಣುತುರಿನಾಲಗೆ ಮೇಲಕೆ ಕುಣಿದಿರಲು

ಬಡವನ ಮನೆಯೊಂದು ಸುಟ್ಟು
ಬೂದಿಯಾಗಿಹುದನು ತಿಳಿದು
ಮನೆಯ ಕಟ್ಟಿ ಕೊಟ್ಟಿಯೊಂದು ಬಡವನು ತಣಿದಿರಲು.

ಒಮ್ಮೆ ದೊಡ್ಡ ಮಳೆಯು ಸುರಿದು
ಹಿರಿಯ ಹೊಳೆಗೆ ನೆರೆಯು ಬಂದು
ಸಾವಿರಾರು ಮನೆಗಳೆಲ್ಲ ತೇಲಿಹೋಗಲು
ನಿರಾಶ್ರಿತರನಿರಿಸಿ ನಿನ್ನ
ರಾಜಭವನದಲ್ಲಿ ನೀನು
ನಿಧಿಯನೆಲ್ಲ ಸೂರೆಗೆಯ್ದು ಕೊರತೆ ನೀಗಲು.

ದಿಕ್ಕು ದಿಕ್ಕಿನಿಂದ ದಿಕ್ಕು-
ಗೇಡಿಗಳೆರಗಿರಲು ಬಂದು
ನೀನೆ ತಂದೆಯೆನಲು ತಂದೆಯಂತೆ ಸಲುಹಿದೆ.
ತಮ್ಮ ವಿದ್ಯೆ-ಬುದ್ಧಿ ತೋರಿ
ಕೈಯ್ಯನೊಡ್ಡಿ ನಿಂತ ಜನರ
ಕೈಯ ತುಂಬಿ ಕಣ್ಮನವನು ತುಂಬಿ ಕಳುಹಿದೆ.

ಕಣಿಗಳಲ್ಲಿ ಕಣಿವೆಗಳಲಿ
ಗಿರಣಿಯಲ್ಲಿ ಧರಣಿಯಲ್ಲಿ
ತುಣುಕು ರೊಟ್ಟಿಗಾಗಿ ಜೀವವನ್ನು ಸುರಿಸುತ
ಬಾಳೆ ಮಹಾ ರೋಗವಾಗಿ
ಬಳಲುತಿರುವ ಕುಲಕೋಟಿಯ
ಕಂಡು ಹೃದಯ ದೀರ್ಣಿಸಿ ಕಣ್ಣೀರು ಸುರಿಸುತ —

ರುಗ್ಣಾಲಯಗಳನು ಕಟ್ಟಿ ವನವಿಹಾರಗಳನೊದಗಿಸಿ
ಬಾಳ ಸಮತೆ—ಮಮತೆಗಳನು ಜಗಕೆ ಸಾರಿದೆ.
ಬನ್ನ ಬಡುವ ಜೀವಕೋಟಿ—
ಯುದ್ಧಾರಕೆ ಹೊನ್ನು—ರನ್ನ—
ವೆಂದು ನಿನ್ನ ಭಾಂಡಾರವ ತೆರೆದು ತೂರಿದೆ.

ಜ್ಞಾನ ದಾನ ಗೆಯ್ಯಲೆಂದು
ನೀನು ಕಟ್ಟಿಸಿರುವ ನೂರು
ವಿದ್ಯಾಲಯುಗಳು ನಿನ್ನನು ಕೀರ್ತಿಸಿರುವವು.
ನಿನ್ನ ಹೆಸರಿಲ್ಲದೆಯೂ
ಕೋಟಿ ಹೃದಯಗಳು ನಿನ್ನನು
ತಮ್ಮ ನಲುಮೆಯಾಳದಲ್ಲಿ ಮೂರ್ತಿಸಿರುವವು.

ನೀನೊಲಿಯದ ಕವಿಗಳಿಲ್ಲ.
ನೀನಿತ್ತಿಹ ತಿನಿಸು ತಿಂದು
ನಿನ್ನ ನೆನೆಯದೆಳೆಯರಿಲ್ಲವಿಡಿಯ ದೇಶದಿ.
ಆದರಿಸಿಹೆ ಹಿರಿಯರನ್ನು;
ಮನ್ನಿಸಿರುವೆ ಗುಣಿಗಳನ್ನು ;
ನಾಡಿಗೆ ನೆರವಾಗದ ಹಣವಿಲ್ಲ ಕೋಶದಿ.

ಕಿಚ್ಚೇಳುತ ನಾಡಿನಲ್ಲಿ
ದಶದಿಶೆಯಲಿ ಯುದ್ಧವೆಸಗಿ
ಇದ್ದ ಕುವರನೊಬ್ಬ, ಬವರಕಣಿಗೊಂಡಿರೆ
ಪುತ್ರಮೋಹ ಪೀಡಿಸಿದರು
ನಾಡಿಗಾಗಿ ತ್ಯಾಗಿಸಿದ್ದೆ
ರಣಾಂಗಣದಿ ನೀಹದಣುಗ ಮುಕ್ತಿ ಕಂಡಿರೆ.

೨

ನಿನಗಾಗದ ನೆರೆಹೊರೆಯುವ-
ರೆಂದರೆಂಥ ದಾನಿಯೀತ !
ಹರಿಶ್ಚಂದ್ರ–ಕರ್ಣನೆಂದು ಕೀರ್ತಿ ಪಡೆಯುಲು
ಹಾಕಿದ ಹೊಂಚಿದು ತಿಳಿಯದೆ?
ಅಹಮಹಮಿಕೆಯಿದರ ಮೂಲ.
ಹೂಡಿದನಿದನೆಲ್ಲ ತನ್ನ ಭೇರಿ ಹೊಡೆಯುಲು.

ದಾನವಿತ್ತ ಸಂಸ್ಥೆಗಳಿಗೆ;
ಹೆಸರಿಡದಲಿ ತನ್ನ ಹೆಸರು
ಮುಂದಾಗುವದೆಂಬುದರಿಂತ ಧೂರ್ತನೀತನು.
ಇಹಪರಗಳ ಸಾಧಿಸಿಕೊಳ-
ಲಿಂತೆಸಗಿದ ಸ್ವಾರ್ಥಸಾಧು.
ಸಂದೆಗವಿರಲೊರೆದು ನೋಡಿರೆಮ್ಮ ಮಾತನು.

ಇದನು ಕೇಳಿ ಕ್ಷುಬ್ಧರಾದ
ಜನರದೊಂದು ಸಭೆಯ ಕರೆದು
ತಮ್ಮ ದೊರೆಯ ಗೌರವಿಸುವ ಬಯಕೆ ಬೆಳೆದಿರೆ
ಪ್ರತಿನಿಧಿಗಳನರಸನೆಡೆಗೆ
ಕಳುಹಿದರೌತಣವ ಕೊಡಲು
ಮೇರೆವರಿವ ಪ್ರೇಮವವರ ಮೊಗದಿ ಹೊಳೆದಿರೆ.

ಪ್ರೇಷಿತ ಪ್ರತಿನಿಧಿಗಳಂದು
ಬರಲು ಮುಗುಳುನಗೆಯು ನಕ್ಕು
ನುಡಿದನರಸ: "ಬೀಳುಗಳೆವರೆಂದು ಮುಳಿವರೆ?
ಉಳಿಸುತಿರುವರನುದಿನವೂ
ಹಗೆಗಳೆನ್ನ ಪತನದಿಂದ.
ಇಂತಿರೆ ನನ್ನವರು ಶೂಲಕೆನ್ನನೆಳೆವರೆ?"

"ದ್ರಾಕ್ಷಿಹಣ್ಣುಗಳನೀವುದು
ಬಳ್ಳಿಯೆಂದು ಮಂತ್ರಾಕ್ಷತೆ-
ಗಳನೆರಚುತ ಪೂಜಿಸುವರೆ ದ್ರಾಕ್ಷಲತೆಯನು?
ಅದನು ಹಚ್ಚಿ ಬೆಳಸಿದವರು
ನೀವು ಸವಿಯದಿರಲು ಹಣ್ಣು
ಮಣ್ಣಾಗದೆ ಕೊಳೆತು? ತಿಳಿವುದಿದರ ಕತೆಯನು."

"ಬೇಡವೆನಗೆ ನಿಮ್ಮ ಶಿಲ್ಪ.
ನನ್ನ ಗೆಯ್ಮೆಯಿರುವದಲ್ಪ.
ನೀವು ಹೊಗಳಲಾತಂಕವದೆನ್ನ ಮುಕ್ತಿಗೆ.
ನಿಮ್ಮ ಪ್ರೀತಿಯಿರಲು ಸಾಕು.
ಅದುವೆ ಪರಮ ಭಾಗ್ಯವೆನುವೆ.
ಅನುವು ದೊರೆಯದಿರಲಿ ಬೇರೆಯಾಸಕ್ತಿಗೆ."

"ಸಿರಿವಂತಿಕೆಯಲ್ಲ ಸುಖವು.
ಲಕ್ಷ್ಮಿಯ ಬರವಹುದು ನಮ್ಮ
ಪರೀಕ್ಷಣಕೆ. ಬಂದ ಸಿರಿಯನೊಂದೆ ಮನದಲಿ-
ಲೋಕಕಾರ್ಯಕಿತ್ತ ನರನೆ
ನಾಕದವರ ಹರಕೆ ಹೊತ್ತು
ಬಾಳಿರುವನು ಲೀನನಾಗಿ ಚಿದ್ಘನದಲಿ."

ಅರಸನೊರೆಯಲಿಂತು, ಬಂದ
ಪ್ರತಿನಿಧಿಗಳು ಪದಕೆರಗುತ
ಕಣ್ಣುದುಂಬಿ ಹೃದಯ ತುಂಬಿ ಮನೆಗೆ ನಡೆದರು.
ಇಂಥ ಮಹಾಪುರುಷನಡಿಯ
ಹಿಡಿವ ಪುಣ್ಯ ದೊರೆತುದೆಮ್ಮ
ಭಾಗ್ಯವೆಂದು ಕಳಿಸಿದ ಸಭೆಯೆದುರು ನುಡಿದರು.

ಅಂದಿನಿಂದ ನಿಂದಕರೆದೆ
ತನಗೆ ತಾನೆ ನಡುಗುತ್ತಿತ್ತು.
ಮೇರೆವರಿಯುತಿತ್ತು ನಾಡ ಜನರ ಹೃದಯವು.
ಗುಣಿಗಳೆಲ್ಲ ಸಾರುತಿರಲು
ದೂರವಿಲ್ಲವೆಂದು ದೊರೆಯು
ಚಕ್ರೇಶನ ಕಾಣುವ ದಿನ, ಮುಕ್ತಿಯುದಯವು.

೩

ದೇಶದೇಶಗಳನು ತಿರುಗಿ
ದಿವ್ಯ ನೇತ್ರವನ್ನು ತೆರೆವ
ಗುರುವನರಸಿ ಪದಕೆರಗುತ ಬಾಳ ಮೂಲದಾ
ತೆರೆಮರೆಯನು ಬದಿಗೆ ಸರಿಸಿ
ನಿಂತೆ ಚಿದಾಕಾಶದಲಿಹ
ತಾರಾಮಂಡಲವ ಕಂಡು, ಬೇರೆ ಗೋಲದಾ

ರವಿ-ಚಂದ್ರರನವಲೋಕಿಸಿ
ಕವಿದ ಕತ್ತಲೆಲ್ಲ ಸರಿಯ-
ಲಾತ್ಮಲೀಲೆಯಲ್ಲಿ ಕಳೆಯುತಿರುಳುಹಗಲನು
ಪ್ರಾಸಾದಕೆ ಸುಪ್ಪಿಗೆಯ್ದಿ
ವರಪ್ರಸಾದವಿತ್ತ ಗುರುವ
ನಾಡವರಿಗೆ ತೋರ್ವುದೆನುತ ಬಾಳ ಮಿಗಿಲನು.

ಸದ್ಗುರುವರನಭಯ ವಾಣಿ
ತಣಿಸಲೆಲ್ಲರೆದೆಮನಗಳ
ಹದಗೊಂಡಿರುವೆದೆಗಳ ಕದ ತಾನೆ ತೆರೆಯಲು
ದೇಶವೆ ನುಡಿದಿತ್ತು: ಬೇಕು
ರಾಜರ್ಷಿಯೆ ನಾಡಿಗೆಲ್ಲ
ಜ್ಞಾನದ ವರದಾನವನ್ನು ಧಾರೆಯೆರೆಯಲು

ಗುರು ಹರಸಿದ: ಜನರನಂದಿ-
ಗಿಂಥ ದೊರೆಯು ದೊರೆತಿರುವದು
ನಿಮ್ಮ ಭಾಗ್ಯ; ಬೆಳೆಯಲಿಂತು ನಿರುತವೆನ್ನುತ;
ಮುಂದೆ ಬರುವ ವಿಧಿಯ ನೆನಿಸು-
ತೊಳಗೊಳಗೇ ಮರುಕಗೊಂಡು
ನುಡಿದನೆಂಬ ತೆರದಿ ಮಂಗಳಾತ್ಮ ಸನ್ನುತ.

೪

ಮಂತ್ರಿ ತನ್ನ ಮಂತ್ರಾಲೋ-
ಚನೆಗೆ ಸ್ಥಾನವಿಲ್ಲದಿರಲು
ಹಾಲೆರೆದಿಹ ಹಾವಿನಂತೆ ಭುಸುಗುಟ್ಟುತ-
ಚಕ್ರವರ್ತಿಯೆಡೆಗೆ ನಡೆದ
ನಿನ್ನನಾಡಿಕೊಳ್ಳಲೆಂದು
ದುರ್ಮಾರ್ಗಿಯು ದುರ್ಮಾರ್ಗದಿ ಪಿಸುಗುಟ್ಟುತ.

ಬೊಕ್ಕಸ ಬರಿದಾಯಿತೆಂದ
ನಿನ್ನ ಭೋಗದಾಳಿಕೆಯಲಿ;
ಮನ್ನಿಸದಾಯ್ತೆಂದ ನಾಡು ಪಾತಷಹನನು.
ಇಂಥ ಮಾಂಡಲಿಕರ ಬದುಕು
ಮುಳುವೆಂದನು ಚಕ್ರವರ್ತಿ-
ಪದಕೆ; ಬಿನುಗುನುಡಿಯಾಡಿದ ದುರಿತಗಹನನು.

ಚಕ್ರವರ್ತಿ ರೇಗಲಿಂತು
ರಾಜ್ಯಭ್ರಷ್ಟನಾದೆ ನೀನು;
ಪದಚ್ಯುತನು— ಮುಕ್ತಿಪದದೊಳಚ್ಯುತನಾಗಿರಲು.
ಪಟ್ಟವಣೆಯ ಬಿಟ್ಟು ನಡೆದೆ
ನಾಡ ಗಡಿಯ ದಾಟ ಮುಂದೆ
ಬಾ ! ಎನ್ನುತ ರಾಜ್ಯರಮೆಯು ರೋದಿಸಿ ಕೂಗಿರಲು.

ದೇಶದ ಜನರೆಲ್ಲ ಬಂದು
ಮಂತ್ರಿಯ ತಲೆ ಹೊಡೆವೆವೆಂದು
ಸಮ್ರಾಟನ ಯುದ್ಧರಂಗಕೆಳೆವೆವೆಂದು ನುಡಿದರು.
ಬೇಡವಿಂಥ ಕಷ್ಟವೆಂದೆ;
ನಾಡೊಳಿರಲಿ ಸುಖಶಾಂತಿಯು
ಮಂತ್ರಿ-ಬಾದಶಹರು ಬೇರೆ ದಾರಿಯನ್ನು ಹಿಡಿದರೂ.

ಮಂತ್ರಿಯಿಂತು ನುಡಿಯುತಿರಲು
ಎಲ್ಲವು ಸುಳ್ಳೆಸುವದೆನಿತು?
ಪೊಳ್ಳಿದ್ದರೆ ನಾಳೆ ತಿಳಿಯಬಹುದು ಮಂತ್ರಿವರರಿಗೂ.
ಸುಳ್ಳಲ್ಲವು ಸಮ್ರಾಟರ
ಕೋಪವವರ ಚಿತ್ತದಂತೆ
ನಡೆವುದುಚಿತ. ಸತ್ಯ ಹೊಳೆಯಬಹುದು ಪಾತಷಹರಿಗೂ.

ದೊರೆಯಾಡಿದ ಮಾತು ಕೇಳಿ
ಕಣ್ಣೀರಿಡುತಿಲ್ಲ ಜನರು
ದೇಶದಲಿದ್ದರು ಪರದೇಶಿಗಳೆನ್ನುತ ವಂದಿಸಿ,
ತೆರಳಿದ್ದರು ದೊರೆಯ ಮನವ
ಮುರಿಯುವ ಮನಸಿಲ್ಲದಾಗಿ
ನೀಚರ ಮುರಿದೊಗೆವುದೆಂಬ ಹಿರಿಯಾಸೆಯ ಬಂಧಿಸಿ.

ಅರಸ ನಡೆದ ದೂರ ತನ್ನ
ನಾಡ ಗಡಿಯ ದಾಟ ಮುಂದೆ
ಪತ್ನಿಸುತರ ಹಿಮ್ಮೇಳವು ಹಿಂದಿನಿಂದ ಬರುತಿರೆ.
ಮುಂದೆ ಮುಂದೆ ತನ್ನ ದಾರಿ-
ಯೆಂದನಿಳೆಯ ದಾಟ ಮುಂದೆ,
ಗಾಳಿ ಬೇರೆ ಲೋಕದೊಂದು ಹೇಳಿಕೆಯನು ತರುತಿರೆ.

ಕೊನೆವರೆಗೂ ಕೊಡುಗೈದೊರೆ;
ಸಕಲರಿಗೂ ದಾನ-ಶೂರ;
ಬಾಳಿದನೀ ಪುಣ್ಯಜೀವಿ ಹಗೆಗಳನ್ನು ಕ್ಷಮಿಸಿಯೂ:
ದುರುಳರನ್ನು ತರಿದೊಗೆಯಲು
ಸಿದ್ಧರಾದ ನಾಡ ಜನಕೆ
ಶಾಂತಿಪಾಠವನ್ನು ಕಲಿಸುತವರ ಮನವ ರಮಿಸಿಯೂ.

ಅವನ ಭವನವಿಂದು ನಾಡ
ಜನರ ಧರ್ಮಶಾಲೆಯಾಗಿ
ಚಾರಿತ್ರವು ಪಯಣಿಗರಿಗೆ ಕಡಲುಗಂಬದಂತಿದೆ.
ಅವನ ಪಂಚಪ್ರಾಣ ಬುವಿಯೊ-
ಳೆಲ್ಲೆಡೆಗಲೆಯುತಿಹ ಸ್ಫೂರ್ತಿ ;
ಬಾಳ ದೇಗುಲದಲಿ ಜೀವ ಮಾನಸ್ತಂಭದಂತಿದೆ.

ಸಂಶೋಧನ ಸಂಸ್ಥೆಯವರು
ದೊರೆಯ ಸಮ್ಮತಿಯನು ಪಡೆಯು-
ತವನ ಕಳೇವರವ ನಿತ್ಯ ನಿರಿಕಿಸಿರುವರು.
ಬಾಳ ಮಹತಿಯನ್ನು ಕುರಿತು
ಸಿದ್ಧಾಂತವ ಕಟ್ಟಲೆಂದು
ಬರಿ ಬಟಾಟೆಯಂಥ ಮೆದುಳ ಪರಿಕಿಸಿರುವರು.

ಬಾನಾಡಿಯ ತೆರದಿ ದೊರೆಯ
ಪಾವನಾತ್ಮ ನಭಕೆ ನೆಗೆದು
ಸಂಶೋಧಕರಾಟಗಳನು ಕಂಡು ನಗುತಿದೆ:
ಅರಳಲಿರುವ ಸುಹೃದಯಗಳು,
ತಾವೆ ತೆರೆಯುತಿಹ ಕಂಗಳು
ಕಂಡ ವಿಮಲ ಜ್ಯೋತಿಯಾಗಿ ಹಿಗ್ಗನುಗುತಿದೆ.



## ೬. ಸದಸ್ಯ   

ಚಕ್ರವರ್ತಿಗಳಾಳಿ
ಹಿಂದೆ, ಮಾಂಡಲಿಕರುರಿ
ಮುರಿದು ತಿನ್ನಲು ನಿಂತ ದೇಶದಲ್ಲಿ
ನಿಃಸಹಾಯಿತ ಜನತೆ
ಮುಂದುಗಾಣದೆ ಹೋಗಲು
ಹೊಟ್ಟೆಪಾಡಿಗೆ ಪರರ ಪಾಶದಲ್ಲಿ, —

ಜನತೆಯಾಳಿಕೆಯನ್ನೆ
ಸಂಸ್ಥಾಪಿಸುವೆನೆಂದು,
ಸ್ವಾತಂತ್ರ್ಯವನು ಮರಳಿ ಗಳಿಸಲೆಂದು,
ಭಾರತೀಯರಿಗೆಲ್ಲಿ
ಒಂದುಗೂಡುವ ಶಕ್ತಿ ?
ಎಂಬ ಕಹಿ ಬಿನುಗುನುಡಿ ಅಳಿಸಲೆಂದು

ನೋಂತು ಸೇರಿದೆನೆಂದು
ನಾನು ಸಂಸ್ಥೆಯನೊಂದು.
ಗಳಿಕೆ ಏನೆನ್ನುವಿರಾ ? ಹಸಿರು ನೋಟು.
ಆಜನ್ಮ ಸೇವಕನು
ಬೇರೆ ಕೆಲವರ ಜೊತೆಗೆ.
ಕೆಲಸವಲ್ಲದೆ ಇದ್ದುಕೊಂದು ವೋಟು.

ಏಕಾಂತದಲಿ ಸತ್ಯ-
ದೆಲ್ಲ ಪೈಲುಗಳೆಂತು
ತಿಳಿಯುವವು ? ನಾಲ್ಕು ಜನರಿರಲು ಜೊತೆಗೆ

ಇಂಥ ಸ್ಥಿತಿಯಲ್ಲಿಂಥ
ಮಾತೆ ಸತ್ಯವದೆಂಬ
ನಿರ್ಣಯವ ಹೇಳುವಧಿಕಾರ ಸಭೆಗೆ.

ಬಲವದೊಂದೆಯೆ ಇಲ್ಲಿ:
ತದೇವ, — ಸಂಖ್ಯಾಬಲವು.
ತಿಳಿದು ನೋಡಲಿದೇನು ಕೊರತೆಯಲ್ಲ.
ಹತ್ತು ಮಂದಿಯಲೇಳು
ಮಂದಿ ಒಳ್ಳೆಯದೆನುವ
ಮಾತೆ ಸತ್ಯವು. ಮತ್ತೆ, — ಮರೆತೆಯಲ್ಲ!

ಇನ್ನುಳಿದವರ ಬಗೆಯು
ಬೇರೆ ಎಂಬುವ ಕತೆಯ!
ಎಂದು ಸಂದೇಹವನ್ನೆತ್ತಲಾಗಿ: —
ಹೆಚ್ಚು ಜನರೊಲಿದಲ್ಲಿ
ಸತ್ಯದೊಲವಿರಬಹುದು;
ಅಂತೆ ನಡೆ, ಮಾರ್ಗವಿರೆ ಕತ್ತಲಾಗಿ.

ಅದರ ಜೀವವೆ ಕಾರ್ಯ-
ನಿರ್ವಾಹ ಮಂಡಲಿಯು;
ಸಂಸ್ಥೆ ತಾ ಕಣ್ಣಾನವ ಸೆಳೆವ ವ್ಯಕ್ತಿ.
ಅದರ ಸಕಲ ಸದಸ್ಯ-
ರೆಲ್ಲ ಬರಿ ಸ್ನಾಯುಗಳು.
ಜಗದಿ ಶಕ್ತಿಯದೊಂದೆ, — ಸಂಘಶಕ್ತಿ.

ನಾಡಿನಾ ನಾಳನಾ-
ಳದಲಿ ರಕ್ತಾಣುಗಳು —
ಸಂಸ್ಥೆಯಿವು — ಬೆಳೆಯುತಿರೆ ಸಾವಿರಾರು,

ಬಹುಮತವೆ ಸತ್ಯ ; ಇನ್-
ನುಳಿದ ಮತಕೆಡೆಯಿರಲಿ ;
ಶಾಂತಿ-ಸಹನೆಗಳಿರಲಿ : ಎಂದು ಕೋರು.

ಭಿನ್ನಮತಗಳು ಕಾಣ-
ಲಾವ ನ್ಯೂನತೆಯಿಲ್ಲ,—
ಬಹುಮತವು ಹಾಕಿಟ್ಟ ಪಥವ ತುಳಿದು.
ನೂರು ದರ್ಶನವಿರಲಿ
ನಾಡಿನೇಳಿಗೆಗಾಗಿ ;
ಮಥನಾಂತ್ಯದಲ್ಲೊಂದೆ ಗೆಯ್ಮೆಯುಳಿದು.

ಶಾಸನಸಭೆಗಳಿರಲಿ.
ಪೌರಸಂಸ್ಥೆಗಳಿರಲಿ.
ವಿದ್ಯೆ-ವಿಮೆ-ಸಂಸ್ಕೃತಿಯ ಸಂಸ್ಥೆಗಟ್ಟೆ
ನವನವೋದ್ಯೋಗಗಳ-
ನೆಲ್ಲ ಕೇಂದ್ರೀಕರಿಸಿ
ಬಾಳೋಣ ವೈಭವದ ಶಿಖರ ಮುಟ್ಟೆ.

ಓಂ. ಸಹ ನೌ ಭವತು.
ಸಹ ನೌ ಭುನಕ್ತು.
ಸಹವೀರ್ಯಂ ಕರವಾವಹೈ.
ತೇಜಸ್ವಿನಾವ-
ಧೀತಮಸ್ತು.
ಮಾ ವಿದ್ವಿಷಾವಹೈ.
**ಓಂ. ಶಾಂತಿಃ. ಶಾಂತಿಃ. ಶಾಂತಿಃ.**

**೨**

**ಇಂತು ಬಾಳಿದೆ ಕನಸು**
**ಕಂಡು ಕೆಲವೊಂದು ದಿನ**
**ವಿಷಮಸ್ಥಿತಿಯೊರೆಗಲ್ಲಿಗದನು ಹಚ್ಚಿ**

ಚಿನ್ನವಹುದೇನೆಂದು
ಪರಿಕಿಸೆನುತಿರೆ ದೈವ,—
ಆ ಪರೀಕ್ಷಣದಲ್ಲಿ ಬಿದ್ದೆ ಬೆಚ್ಚಿ.

ಎದೆಯು ಡವಡವವೆನಲು
ಕಣ್ಣು ಮುಚ್ಚುತ ಕೈಯ್ಯ-
ನೆತ್ತಿ ಅನ್ಯಾಯವನು ಪಳಗಿಸುವರು
ವೋಟುಗಾರರು; ವೋಟು
ಬಭ್ರುವಾಹನನಂತೆ
ಓತಗೆ ಮುಳುವೆಂಬವೊಲು ಮುಳುಗಿಸುವರು

ಅಚಲ ಶ್ರದ್ಧಾಳುಗಳ,
ದುಃಖಸಾಗರದಲ್ಲಿ.
ಸಂಖ್ಯೆಯೇ ಸತ್ಯವೆನುವಂಥ ಹೊತ್ತು
ಬಂದಿತಿಂದಿಗೆ. ಮುಂದೆ
ಮತ್ತಾವ ವಿಧಿಯಾಟ
ನಮಗೆ ಕಾದಿದೆ ಯಾರಿಗೇನು ಗೊತ್ತು?

ತನ್ನ ತಾನರಿಯದಿಹ
ವೋಟನಪವ್ಯಯಗೊಳಿಸಿ
ಕಲಿಯುಗವ ಕಟ್ಟುವನು ವ್ಯಾಪಾರಿಯು.
ಈ ವೋಟುಗಳ ಬಲದಿ
ತನ್ನಾಸ್ತಿ-ಪಾಸ್ತಿಯನು
ಭದ್ರವಾಗಿರಿಸುವನು ಸೋಮಾರಿಯು.

ಕಲಿತ ವೋಟಗೆ ಬೇರೆ
ಓಟವೀ ಯುಗದಲ್ಲಿ.
ವೋಟುಗಾರರು ಸಮಾನಸ್ಕಂಧರೆಂದು

ವ್ಯಕ್ತಿತ್ವದಾ ಹಿರಿಮೆ-
ಯನ್ನು ಬದಿಗೊತ್ತುವರು,—
ಭಾವಿಸುತ ತಾವಿಂದ್ರ-ಚಂದ್ರರೆಂದು.

ತರ್ಕ; ತಾರ್ಕಿಕ ವಾದ;
ಹಿಂಸೆ; ತೇಜೋಭಂಗ;
ಹಟಮಾರಿತನ; ಧೂರ್ತತನದ ಹೊಂಚು:
ಒಂದನೊಂದಿವು ಮೀರಿ
ಮುಳ್ಳುಗಳ್ಳಿಯೊಲಾಗಿ
ಕೊನೆವ ಕಾರಸ್ಥಾನ; ತಂತ್ರ; ಒಳಸಂಚು.

ಜೊತೆಗಾರರಿಲ್ಲರಿಗೆ
ಕರ್ತುಮ್, ಅಕರ್ತುಮದ
ಅನ್ಯಥಾ ಕರ್ತುಮದ ಶಕ್ತಿಯಿರಲು;
ಅವರ ಮಾತೇ ಗೀತ,
ಅವರ ಬಗೆ ಬೈಬಲ್ಲು
ಎಂದವರ ಕುರುಡು ನಂಬುಗೆಗಳಿರಲು:

ಹತ್ತು ಜನರಲ್ಲೊಬ್ಬ
ನೊಂದುಕೊಂಡಿರೆ ಮನದಿ
ಹೊತ್ತುವದು ಪ್ರಳಯಾಗ್ನಿ ನೇಮದಿಂದ.
ಎರಚಿದಗ್ನಿಗೆ ಸಂಸ್ಥೆ —
ಯಿರಲು ಆಹುತಿಯಾಗಿ
ಬರುವರಾರಲ್ಲಿಂದ ಕ್ಷೇಮದಿಂದ?

ಹತ್ತು ಯಜಮಾನರಾ
ಸೇವೆಗೆಯ್ವುದಕಿಂತ
ಒಬ್ಬ ದೊರೆಯಂಕಿತದಲಿಹುದು ಲೇಸು.

“ ಇವರ ಕ್ಷಮಿಸ್ಸೈ, ತಂದೆ!
ತಾವೇನು ಗೆಯ್ವೆವೆಂ-
ಬರಿವೆ ತಮಗಿಲ್ಲದರು!” ಎಂದ ಏಸು.

ಇಲ್ಲಿ ಸ್ವಾರ್ಥತ್ಯಾಗ-
ದೊಂದು ಹಿರಿ ಹೆಸರಿನಲಿ
ಸ್ವಾರ್ಥ ಹೆಮ್ಮರವಾಗಿ ಬೆಳೆಯುತಿಹುದು.
ಅಧಿಕಾರ, ದ್ರವ್ಯ, ಅಹ-
ಮಹಮಿಕೆಗಳಲಿ ಸ್ವಾರ್ಥ
ಬೇರು ಬಿಟ್ಟಿರೆ ಸಂಸ್ಥೆ ಕೊಳೆಯುತಿಹುದು.

ವಿಜ್ಞಾನಿ ನಿರ್ಮಿಸಿದ
ವಿಷವಾಯು ಸಂಚಯದ
ತೆರದಲಿ ಪ್ರಜಾವಾದಿ ಕಟ್ಟಿರುವ ಕೂಟ
ಜಗಳೆಯೊಲು ಕೂಟಸ್ಥ-
ರೆದೆರಕುತವನು ಹೀರಿ
ಪ್ರಗತಿ ಬರಿ ಹಳವಂಥ, ಮರಣದಾಟ.

ನಿಜ: ಶಿಖಂಡಿಗೆ ಪಾರ್ಥ;
ಸ್ವರ್ಗವು ತ್ರಿಶಂಕುವಿಗೆ;
ಉತ್ತರಕುಮಾರಗೆ ವಿರಾಟಸಭೆಯು;
ಪ್ರಮಥನಿಗೆ ಮಾತ್ರ ಹೃದ-
ಯವ ತಿನ್ನುತಿಹ ಗಮಡ:
ಇಂತಾಗಿ ಸಂಸ್ಥೆ-ಸಂಸ್ಥೆಯಲಿ ಹವೆಯು

ಕೆಡುತಿಹುದು ಬ್ರಹ್ಮರಾ-
ಕ್ಷಸಗಣವು ಬೆಳೆದಿರಲು
ಸಂಸ್ಥೆಗೊಳುತಿಂತೆಮ್ಮ ನಾಡಿನಲ್ಲಿ —

ಸುಖ-ಶಾಂತಿಯನು ದೇಶ-
ದಲ್ಲಿ ಪಡೆಯದೆ ತೊಲಗಿ
ನಾಡನ್ನು ಕಾಣೋಣ ಕಾಡಿನಲ್ಲಿ!

ವ್ಯಕ್ತಿಯನು ಪೋಷಿಸಲು
ಬೆಳೆದ ಸಂಸ್ಥೆಗಳಿಂತು
ಹೊಲವನ್ನೆ ಮೇಯುತಿಹ ಬೇಲಿಯಂತೆ
ವ್ಯಕ್ತಿಯನು ಹಿಮ್ಮೆಟ್ಟಿ
ನಿಂತಿರಲು ನಾಡಿನಲಿ, —
ಕಣ್ಣೆಟ್ಟ ಗುರಿ ಬಂಡಿಗಾಲಿಯಂತೆ!

೩

ಮುಳ್ಳುಗಳ್ಳಿಯ ಕಿತ್ತು
ಹಾಕಲೆನೆ ಸರ್ವಾಧಿ-
ಕಾರದಾ ತಂತ್ರವನು ಹೂಡಲಾಗಿ
ಸಣ್ಣ ಬೀಳ ಹುಳದಂತೆ
ಮುಳ್ಳನಲ್ಲದೆ ಹಣ್ಣು
ಸಹ ತಿಂದು ಹಾಳುಗೆಯ್ಯುವುದು ನೋಡಲಾಗಿ.

ಬಹುಮತದ ರಾಜ್ಯದಲಿ
ಒಮ್ಮತವು ದುಃಸಾಧ್ಯ.
ಕುಂದು-ಕೊರತೆಗಳಿಲ್ಲಿ ಬರುವುದನಿವಾರ್ಯ.
ಸರಿದು ನಿಲ್ಲುತ ನೋಡು;
ಒಳಗಿದ್ದು ಹೋರಾಡು;
ಜನತೆಯಾಳ್ಕೆಯ ಮುಂದುವರಿಸುವದೆ ಕಾರ್ಯ.

ಮನವಿರಲು ಚಾಣಕ್ಯ-
ನೀತಿಯರಗಿಸಿಕೊಂಡು
ಚಾಣಕ್ಯತಂತ್ರಗಳಿಗೆದುರಾಗಿಸು

ಕಪಟ ನಾಟಕವನ್ನು,
ಸತ್ಯವನು ಬೆಳಗಿಸಲು :
ಲೇಸನುಳಿಸಲು ಕೆಡಕ ವಿನಿಯೋಗಿಸು !

ಸಂಸ್ಥೆಗಳು ಚೆನ್ನು, ಆ
ಸಂಸ್ಥೆಗಳ ತುಂಬಿವಾ
ಜನರು ಚೊಕ್ಕಿರುವಂತೆ ನೋಡಿಕೊಳ್ಳು.
ನರರೂಪವನು ತಳೆದ
ಹಾವು, ಮೂಗಿಲಿ, ಚೇಳು
ಸೇರುತವುಗಳ ಮಾಡದಿರಲಿ ಪೊಳ್ಳು.

ನೀಲಕಂಠನ ತೆರದಿ
ನಿಂತು ವಿಷವನ್ನು ಕುಡಿ.
ಪ್ರಮಥನಾಗುತ ಹೃದಯವನ್ನು ನೀಡು
ಜನತಾಜನಾರ್ದನನ
ಗರುಡಪಕ್ಷಿಯ ಭಕ್ಷ-
ಣಕ್ಕೆಂದು. ಇಲ್ಲದಿರೆ ನೀನು ಕೇಡು

ಏಕಾಂತಮೋನಾಮ-
ವನ್ನು, ವೈಯ್ಯಕ್ತಿಕದ
ಕಾಣಿಕೆಯ ತಾಯ್ನೆಲಕೆ ಮೀಸಲಿಟ್ಟು;
ಧಾರೆಯೆರೆದವಳಡಿಗೆ
ಶಕ್ತಿ-ಭಕ್ತಿಯನೆಲ್ಲ,
ಪದಪದ್ಮಯುಗಲಕ್ಕೆ ನೊಸಲನಿಟ್ಟು.

ವಿದ್ಯೆ-ಸಂಸ್ಕೃತಿ ಬೆಳೆದು
ಎದ್ದೇಳುತಿರೆ ನಾಡು,
ತನ್ನನ್ನೆ ತಾ ತಿದ್ದಿಕೊಳಬಹುದು ದೋಷವ.

ಮುಂದೆ ಬಹ ಪೀಳಿಗೆಯು
ಹೊಸ ಪಾಠವನು ಕಲಿತು
ಕಳೆಯಬಹುದದು ಜನತೆಯನು ಕವಿದ ಮಂಕು.

ಪೋಟಿ ನರಕವು, ಮೂರ್ಖ—
ನದರ ಮಾಲಕನಿರಲು ;
ಅದೆ ಸ್ವರ್ಗ, ಹೊಂದಿದವನಿರಲು ಜ್ಞಾನಿ-ಗುಣಿ.
ಮಂಗನೆಡೆ ಮಾಣಿಕ್ಯ,
ಹಾವ ಹೆಡೆಯಲಿ ರತ್ನ,
ನಗಿಸಿ ಕೊಲ್ಲುವ ಕರಡಿಯೆಡೆ ಸ್ಯಮಂತಮಣಿ :—

ಸಲ್ಲವಿವು ; ಸಲುಹವಿವು.
ಮಾಹೇಶ್ವರಿಯು, ಲಕ್ಷ್ಮಿ,
ಸರಸತಿಯು ಮನುಕುಲವ ಕಾಯಲಡಿಗಡಿಗೆ
ವ್ಯಕ್ತಿ-ವ್ಯಕ್ತಿಯ ಹೃದಯ—
ದಲ್ಲಿ ಪಡಿಮೂಡಿರಲಿ
ರತ್ನತ್ರಯ, ಹೊಸ ಬೆಳಕ ಬೀರುತೆಲ್ಲೆಡೆಗೆ.

---

## ೨. ಸಮತಾವಾದಿ ( ಸೋಶಾಲಿಸ್ಟ್ )

ನೋಡಿಲ್ಲಿ ಸಾಗಿಹರು ಸ್ವಾತಂತ್ರ್ಯಸಂಗ್ರಾಮ-
ಕೆಂದು ಪೂತಾತ್ಮರಿವರಡಿಗೆರಗು, ವಂದಿಸು.
ನೋಡು ! ತೆರವ್ರೋ ತೆರವು ನಾಡಿನಲಿ ಸುಗ್ರಾಮ,
ಪಟ್ಟಣದ ದಟ್ಟಣೆಯು. ಬಾರಿಲ್ಲಿ, ಹೊಂದಿಸು
ಭುಜಕೆ ಭುಜವಾನಿಸುತ. ನೋಡು ! ವೀರರ ನಡೆಗೆ
ತಲ್ಲಣಿಸುತಿದೆ ಪೃಥಿವಿ. ಮತ್ತೆ ಶೇಷನ ಹೆಡೆಗೆ
ಕಂಪಾನುಕಂಪವಿದೆ. ಇನ್ನೆಲ್ಲಿ ಸಿಕ್ಕಿಲ್ಲ-
ವಿಂಥ ದಂಡಿನ ಯಾತ್ರೆ ಇದನಾರು ಮಿಕ್ಕಿಲ್ಲ.
ಇಂದು ಪಾದಾಕ್ರಾಂತರಷ್ಟದಿಕ್ಪಾಲಕರು.
ಇಂದು ಕಳೆಗುಂದಿದರು ಸಾಮ್ರಾಜ್ಯಚಾಲಕರು.
ಇವರ ಪಾದದ ಧೂಳಿ ವೈಕುಂಠವನೆ ಮುಚ್ಚಿ
ಸ್ವರ್ಗದ ಮಹಾದ್ವಾರವನು ತೆರೆದು ಸುರಕೋಟಿ-
ಗಳನೆಳೆದು ಪಾತಾಳಕಲ್ಲಿ ಧ್ವಜವನು ಹಚ್ಚಿ
ವ್ಯಾಪಿಸುವದಿಳೆಯನ್ನು ಖಂಡಖಂಡವ ದಾಟಿ !

ರಾಮರಾಜ್ಯದೊಳಿವರು ಬೀಸಿದ್ದು ಬರಿ ರಾಗಿ.
ದಿಲ್ಲಿ ದ್ವಿಪಾಂತರದೊಳೇಕಚಕ್ರಾಧಿಪತಿ-
ಯಾಳಿಕೆಯಲಿವರಿದ್ದರಾಗುತ್ತ ಬೈರಾಗಿ.
ಮಾಂಡಲಿಕರಂಡಲೆಯುತಿರಲಿವರಿಗೇನು ಗತಿ ?
ಪಾತಕಹರಾಳಿಕೆಯಲಾಯ್ತಿವರಿಗುತ್ಪಾತ ;
ಪಾಳೆಗಾರರ ವೇಳೆ ವಿಷಮ ವಜ್ರಾಘಾತ.

ರಾಷ್ಟ್ರಕೂಟ, ಕದಂಬ, ಚಾಲುಕ್ಯರಿವರೆಂಬ
ದುರಭಿಮಾನವು ಬೇಡ. ಕಾಣಿದನು ಕಣ್ತುಂಬ :
ಇಂದೀ ಮಹಾಪೂರವಾದ ಜನಜಾತ್ರೆಯನು
ತಳ್ಳಿದರು, ತಡೆದರವರಾ ಮಹಾಯಾತ್ರೆಯನು.
ಹಂಪಿಯ ವಿರೂಪಾಕ್ಷ, ಬನವಸೆಯ ಮಧುಕೇಶ
ಕಾಯಲಿಲ್ಲಿವರ, ಬಾದಾಮಿ ಬನಶಂಕರಿಯು,
ಸಿರಿವೊಳಲ ಜಯಲಕ್ಷ್ಮಿ. ಬೇರೊಬ್ಬ ಪರಮೇಶ
ಸಂರಕ್ಷಿಸಿದ. ಕಾಯ್ವಳಿನ್ನು ಜನಶಂಕರಿಯು !

ಚಕ್ರವರ್ತಿಗಳು ಮಾಣಿಕ್ಯದಾಧಿಕ್ಯದಲಿ
ಮೆರೆಯೆ ನೋಡುತನಕ್ಕರೆಳೆನಗೆಯನಿವರು.
ಕವಿಚಕ್ರವರ್ತಿಗಳು ಭಾಗ್ಯವಂತರ ನುತಿಸೆ
ದುರ್ಭಾಗ್ಯವಿದು ಧರಿತ್ರಿಯದೆಂದರಿವರು !
ಒಂದು ದಿನ ಬಂದವೆನಲಿಲ್ಲ ಒಡ್ಡೋಲಗಕೆ,
ಒಬ್ಬರೊಬ್ಬರ ಕೊಲುವ ಬಂಧುಗಳ ಪಾಳಯಕೆ.
ಸ್ವಾಮಿಭಕ್ತಿಗೆ ಮಡಿವ ಸೇವಕರ ನಿರಿಕಿಸುತ
ಮಾಸತಿಪದಕೆ ಸಾಯ್ವ ಹೆಂಗಳನು ಪರಿಕಿಸುತ,
ಒಡನಾಡಿಗಳ ಮೂರ್ಖತನಕೆ ಕಂಬನಿ ಮಿಡಿದು
ಸಾಗಿದರು ಪೂತಾತ್ಮರಿಟ್ಟ ಗುರಿಯನು ಹಿಡಿದು :
" ದೇಸಗತ್ತಿಯ ದಿನಗಳಿಬ್ಬನ್ನಿ ಬಯಲಾಗಿ
ಮುಂದೆ ಬರುವದು ಬೀಸುಗತ್ತಿ ದಿನವು
ಸಮ್ರಾಟ-ಚಕ್ರವರ್ತಿಗಳು ನಿರ್ವಯಲಾಗಿ
ನಿರ್ನಾಮವಾದಂದು ಸುಖಿಯಹುದು ಜನವು ! "

“ ಪಂಪ-ರನ್ನರು ವಂದಿಮಾಗಧಿಗಳಿಲೆ ಕೇಳ್ಳು—
ದಾಸ ಶಿವಶರಣ ತೀರ್ಥಂಕರರದೆಲ್ಲ
ನೋವ ಮರೆಸುವ ಮಾಯೆ; ಯಿಂದ್ರಜಾಲದ ಬಾಳು;
ಕೇಳವೀ ಧರ್ಮ-ಕಲೆ ಜೀತದಾಳಿನ ಸೊಲ್ಲ:
ಪೂತಾತ್ಮನಾಗಿ ಹಿರಿ ಮೌನದಿಂದಿರು, ಮುಂದೆ
ಬರಲಿಹುದು ನಿನ್ನಸುವ ತಣಿಪ ಕಲೆ, ಒಂದೊಂದೆ-
ಯಾಗಿ ಮುಗಿಯುವವೆಂದು ಲೋಕದನ್ಯಾಯಗಳು,
ಜ್ಞಾನಿಗಳ, ಧನಿಕರಾ ಸ್ವರ್ಗ ವೈಕುಂಠಗಳು.”
ಹೀಗೆಂದದೊರ್ವನವ್ಯಕ್ತ ಕವಿಯಜ್ಞಾತ-
ವಾಸದಲಿ ಮೊಳಗಿಸಿದನೆಂದು ಮುಂದಿನ ಮಾತ.
“ ಪಂಡಿತರ ಮೆಚ್ಚಲ್ಲ, ಪೀಡಿತರ ಕಾಳ್ಗಿಚ್ಚು
ಮುಂದೆ ಬಹ ಕಾವ್ಯದಾ ಸೆಲೆಯು, ನೆಲೆಯು.
ಇಲ್ಲದರ ಕನಸಲ್ಲವಿದ್ದ ಬಾಳಿನ ಕೆಚ್ಚು
ಧರ್ಮವೆಂಬುದು, ಲೋಕಸುಖದ ಬೆಳೆಯು.”

ನೋಡದೊ! ಮುಮುಕ್ಷುಗಳು, ಮತ್ತೆ ನಿತೊ ಭಿಕ್ಷುಗಳು
ಬಿಡದೆ ತೋರಿದರಂದಿಗನ್ಯಾಯದೆದುರು,
ಸರ್ವಜ್ಞ, ಕನಕ, ಜಂಗಮ ತೆರೆದ ಚಕ್ಷುಗಳು
ಮುಚ್ಚಿದವು; ಧರ್ಮವಾಯ್ತೊಂದು ಹಿರಿ ಬೆದರು.
ಸಿಂಹಾಸನವ ಬಿಡದ ಭೂಪನೊಡ್ಡಿದ ತಾಪ,
ಸ್ವಾರ್ಥವೊಂದನೆ ತಿಳಿದ ಸೇನಾನಿಯಾ ಕೋಪ,
ಅರ್ಥಸಚಿವನನರ್ಥ, ಚಾಣಕ್ಯದುರ್ನೀತಿ,
ಮೆಣಸರೆವ ಹರದ ಹುಟ್ಟಿಸುತಿಹ ಮಹಾಭೀತಿ
ಮುತ್ತಿದವು ಪಥಿಕರನು. ಯುದ್ಧಗಳ ಕೆಂಧೂಳಿ
ಬಾನಂಗಳಿಗೆ ಬಂತು ಹಿರಿಯಾಸೆಗಳ ಹೋಳಿ:

" ಆಳುಮಕ್ಕಳು, ನಮ್ಮ ಕಣ್ಣೀರು ಮುನ್ನೀರು.
ಬಾನೆಮ್ಮ ಮನದಂತೆ— ಬಟ್ಟಬಯಲು.
ತಿನ್ನಲೆಮಗಿಲ್ಲನ್ನ, ಕುಡಿಯಲಿಕೆ ತಿಳಿ ನೀರು,
ಗಾಳಿಗಳ ತಿರ್ಕ್ಯಾಟವೆಮ್ಮ ಹೊಯಲು. "

ನೋಡು ! ವೀರರ ತಂಡ ಮುನ್ನಡೆದಿಹುದಖಂಡ :
ಪಡುವಣದ ಪಾಡೇನು, ಮೂಡಣದ ಮಾಳ್ಕೆಯು ?
ತಳ್ಳಂಕಗೊಳುತಿರುವದೆಲ್ಲೆಡೆಗೆ ಬ್ರಹ್ಮಾಂಡ-
ವದನಳಿಸ ಬರಿ ಕಾಳನಿಡಿದೋಳ ತಳ್ಕೆಯು.
ಸಾಹುಕಾರರ ಜೀವ ಅವರ ಹಮ್ಮಿಣಿಗಳಲಿ
ಗಿರಣೀಶ್ವರರ ಸ್ಫುರಣ ವವರ ಕಗ್ಗಣಿಗಳಲಿ.
ಬಂತು; ಬಂದಿತು ದೌಡು ! ವಣ್ಯಾಯಕರ ದಂಡು,
ಜೀತದಾಳಿನ ಸೈನ್ಯ. ಅಂಜದಿರಿದನು ಕಂಡು.
ಬೇರು ಬಿಟ್ಟಿತು ವಿಷಮಸೃಷ್ಟಿ ಬುಡಮೇಲಿರಲು,
ನಡಲಿಹರು ಸಮತೆಯನು ಸ್ವರ್ಗಸುಖವೈತರಲು.

ಯುಗಯುಗದೊಳನ್ಯಾಯಕೋಟೆಯಲಿ ಮುಳುಗಿರುವ
ಧಾರುಣಿಗೆ ಬರಬಹುದು ಧನ್ಯತೆಯ ಬೆಳೆಯು.
ಹಗೆತನದ ಹಾವು ಕಾಲ್ತೊಡಕಿರುವ ಮನುಕುಲಕೆ
ಇಂದಿಲ್ಲ ನಾಳಿರುವದೊಗೆತನದ ಕಳೆಯು !

ಸ್ವರ್ಗಸ್ವಪ್ನಗಳೆಲ್ಲವನುದಿನದ ಬದುಕಾಗಿ
ವಿಜ್ಞಾನವಿರೆ ಬುವಿಯು ಹೂವಾಡಗಿತ್ತಿ
ರೋಗ ಮಾರೋಗಗಳು ಗತಯುಗದ ಮಾತಾಗಿ
ಆದಿಶೇಷನ ತೆರದಿ ನಲುಮೆ ತಾ ಸುತ್ತಿ

ಧಾರುಣಿಯು, ಪವಡಿಸಿರೆ ಕ್ಷೀರಸಾಗರದಲ್ಲಿ
ವಸುಧೆಯನ್ನಾಳಿದಂದು ಹಿಗ್ಗಿನಾಗರವೆಲ್ಲಿ ?
ಆಕಾಶ ಪವನಾಗ್ನಿ ತೇಜ ಸಲಿಲಗಳೆಲ್ಲ
ತಲೆವಾಗುತಾಲಿಸಿರಲಂದು ಮನುಜನ ಸೊಲ್ಲ,
ಹುಟ್ಟಿದೊಡನೆಯೆ ನರನು ಹೊಟ್ಟೆ ಹೊಸೆವುದ ಮರೆತು
ಬಾಳುವನು ಬಾಳುವೆಯ ಮೂಲಮಂತ್ರವನರಿತು.
ಆ ಸ್ವರ್ಣಯುಗಳಾಗಿ ತಾಳೋಣವೆಂದು
ಕ್ರಾಂತಿಗೆದುರಾಗುತಿಹ ಶಿಲುಬೆಗಳನು;
ನಾಳೆ ಲೋಕವೆ ಸತ್ಯಲೋಕವೆಂದು
ಇಂದಿನೀ ಬಾಳನುದ್ವೇಗಗಳನು.

೧೯೩೮

## ೮. ಅಸುರ   

ಮೊಗವೆಲ್ಲ ಕಂದಿತ್ತು.
ಹಿರಿಯಾಸೆ ತೊಲಗಿತ್ತು.
ಅಳಿವ ನಗೆಯಲ್ಲಿತ್ತು ಬರಿ ವಿಷಾದ.
ಏಕಚಕ್ರಾಧಿಪತಿ-
ಯಾಗಿ ಹಿಟ್ಲರ ಮೆರೆದ:
ಈಗ ಬದುಕಾಗಿತ್ತು ಹಿರಿ ಪ್ರಮಾದ!

ಲೋಕವನೆ ನಡುಗಿಸಿದ.
ಇತಿಹಾಸ ಬದಲಿಸಿದ.
ನಿನ್ನೆ ಸೈನಿಕನಿಂದು ಸಮ್ರಾಟನವನು!
ಗಾಡಿ ನಿಲ್ಕನೆಯಿಂದ
ನಿಲ್ಕನೆಗೆ ನಡೆವಂತೆ
ರಾಜ್ಯಗಳನಾಕ್ರಮಿಸಿ ನಿಂತ ನಿರ್ಭಯನು!

ದೈವ ಪ್ರತಿಕೂಲವಿರೆ
ಹಿರಿಯಾಸೆ ಬಯಲಾಗಿ
ತಾಯ್ನೆಲದ ರಕ್ಷಣಕೆ ದೇಹವಿತ್ತು
ವೀರ ಸ್ವರ್ಗವನೈದು-
ವುದೆ ತನಗೆ ತಕ್ಕುದೆಂ-
ದವ ಬಗೆದ. ಈ ಹಿರಿಮೆ ಅವಗೆ ಗೊತ್ತು.

ಜ್ಯೋತಿಷಿಯ ಕರೆದು ಗ್ರಹ-
ಗತಿ ತಿಳಿವ ಹಿಟ್ಲರನು
ರಣಕಾಳಿಯುಡಿನೆ ತಲೆಕೊಡುವ ಮುನ್ನ

ತನ್ನ ಜೀವಿತದ ಸಾ-
ರವ ಲೋಕವೆಂತೇನು
ಗ್ರಹಿಪುದೆಂಬುದ ತಿಳಿವ ಚಪಲವಿರೆ, ತನ್ನ

ಅಂತರಾತ್ಮದಿ, ನಡೆದ
ಕವಿಯೊಬ್ಬ ನಾಗರಕೆ.
ಮೊದಲೆಂದಿಗೀ ಕವಿಯನವನು ಕಾಣ !
ಇರಲೇನು? ವಿಷಮವಿರೆ
ಕಾಲ, ಅನುಗುಣವಾಗಿ
ನಡೆವಲ್ಲಿ ಹಿಟ್ಲರನು ತಾನು ಬಲು ಜಾಣ.

ಕವಿ ಬಂದು ಸ್ವಾಗತಿಸಿ
ಹಿಟ್ಲರನ ಕರೆದೊಯ್ದು.
ಕುಳ್ಳಿರಿಸಿ ಬೆಸನವೇನೆಂದು ಬೆಸಗೊಂಡ.
ತನ್ನ ಬರವನು ಸಾಜ
ವೆಂದು ಪರಿಗಣಿಸಿರುವ
ಕವಿಯ ಠೀವಿಯು ಕಂಡು ವೀರ ಖತಿಗೊಂಡ.

ಇರಲೇನು? ಮುಳಿಸಿಗವ-
ಕಾಶವಿಲ್ಲೆಳ್ಳಷ್ಟು !
ಕುಶಲವಾಡುತ ಕುಳಿತ ಹಿಟ್ಲರನು ನುಡಿದು :
" ಇತ್ತೀಚೆಗೇನು ಬರ-
ವಣಿಗೆ ? ಕಥೆ ಕಾವ್ಯವನು
ರಚಿಸಿದಿರ, ಜನರ ಹೃದಯವನು ಮಿಡಿದು ? "

ನಸು ನಕ್ಕು ಕವಿಯೆಂದ :
" ನಿಮ್ಮ ಕಟ್ಟಾಣತಿಗೆ
ಕಮರಿ ಹೋಗಿದೆ ನಾಡ ಕಾವ್ಯಲತೆಯು !

## ೮. ಅಸುರ   

ಮೊಗವೆಲ್ಲ ಕಂದಿತ್ತು.
ಹಿರಿಯಾಸೆ ತೊಲಗಿತ್ತು.
ಅಳಿವ ನಗೆಯಲ್ಲಿತ್ತು ಬರಿ ವಿಷಾದ.
ಏಕಚಕ್ರಾಧಿಪತಿ-
ಯಾಗಿ ಹಿಟ್ಲರ ಮೆರೆದ:
ಈಗ ಬದುಕಾಗಿತ್ತು ಹಿರಿ ಪ್ರಮಾದ!

ಲೋಕವನೆ ನಡುಗಿಸಿದ.
ಇತಿಹಾಸ ಬದಲಿಸಿದ.
ನಿನ್ನೆ ಸೈನಿಕನಿಂದು ಸಮ್ರಾಟನವನು!
ಗಾಡಿ ನಿಲ್ಕನೆಯಿಂದ
ನಿಲ್ಕನೆಗೆ ನಡೆವಂತೆ
ರಾಜ್ಯಗಳನಾಕ್ರಮಿಸಿ ನಿಂತ ನಿರ್ಭಯನು!

ದೈವ ಪ್ರತಿಕೂಲವಿರೆ
ಹಿರಿಯಾಸೆ ಬಯಲಾಗಿ
ತಾಯ್ನೆಲದ ರಕ್ಷಣಕೆ ದೇಹವಿತ್ತು
ವೀರ ಸ್ವರ್ಗವನೈದು-
ವುದೆ ತನಗೆ ತಕ್ಕುದೆಂ-
ದವ ಬಗೆದ. ಈ ಹಿರಿಮೆ ಅವಗೆ ಗೊತ್ತು.

ಜ್ಯೋತಿಷಿಯು ಕರೆದು ಗ್ರಹ-
ಗತಿ ತಿಳಿವ ಹಿಟ್ಲರನು
ರಣಕಾಳಿಯುಡನೆ ಕಲೆಕೊಡುವ ಮುನ್ನ

ತನ್ನ ಜೀವಿತದ ಸಾ-
ರವ ಲೋಕವೆಂತೇನು
ಗ್ರಹಿಪುದೆಂಬುದ ತಿಳಿವ ಚಪಲವಿರೆ, ತನ್ನ

ಅಂತರಾತ್ಮದಿ, ನಡೆದ
ಕವಿಯೊಬ್ಬ ನಾಗರಕೆ.
ಮೊದಲೆಂದಿಗೀ ಕವಿಯನವನು ಕಾಣ !
ಇರಲೇನು ? ವಿಷಮವಿರೆ
ಕಾಲ, ಅನುಗುಣವಾಗಿ
ನಡೆವಲ್ಲಿ ಹಿಟ್ಲರನು ತಾನು ಬಲು ಜಾಣ.

ಕವಿ ಬಂದು ಸ್ವಾಗತಿಸಿ
ಹಿಟ್ಲರನ ಕರೆದೊಯ್ದು.
ಕುಳ್ಳಿರಿಸಿ ಬೆಸನವೇನೆಂದು ಬೆಸಗೊಂಡ.
ತನ್ನ ಬರವನು ಸಾಜ
ವೆಂದು ಪರಿಗಣಿಸಿರುವ
ಕವಿಯ ಠೀವಿಯ ಕಂಡು ವೀರ ಖತಿಗೊಂಡ.

ಇರಲೇನು? ಮುಳಿಸಿಗವ-
ಕಾಶವಿಲ್ಲೆಳ್ಳಷ್ಟು !
ಕುಶಲವಾಡುತ ಕುಳಿತ ಹಿಟ್ಲರನು ನುಡಿದು :
" ಇತ್ತೀಚೆಗೇನು ಬರ-
ವಣಿಗೆ ? ಕಥೆ ಕಾವ್ಯವನು
ರಚಿಸಿಹಿರ, ಜನರ ಹೃದಯವನು ಮಿಡಿದು ? "

ನಸು ನಕ್ಕು ಕವಿಯೆಂದ:
" ನಿಮ್ಮ ಕಟ್ಟಾಣತಿಗೆ
ಕಮರಿ ಹೋಗಿದೆ ನಾಡ ಕಾವ್ಯಲತೆಯು !

ನಿಮ್ಮ ತತ್ವದ ಮೂಡಿ—
ಸಲು ಕವಿಗೆ ಮೂಡುಂಟು.
ಇಲ್ಲದಿರೆ ಮುಳುಗೊಂದೆ ಅವಗೆ ಜೊತೆಯು!"

"ಇರಲೇನು? ಬರೆದಿಹೆನು
ಕೆಲವೊಂದು ಕೃತಿಗಳನು.
ನನ್ನ ಕಂಗಳನುಳಿದು ಬೇರೆ ನೋಟ
ಕಂಡಿಲ್ಲವವುಗಳನು.
ನಿಮಗೆ ತೋರಿಸಲೇನು?
ರುಚಿಸುವದೆ ನಿಮಗಿಂಥ ಕಲ್ಪಕತೆಯಾಟ?"

ಹಿಟ್ಲರನು ರೇಗಿದನು.
ಮರಣಶಿಬಿರಕೆ ಕವಿಯ
ಕಳಿಸುವಾ ಯೋಚನೆಯು ಮಿಂಚಿ ಹೋಯ್ತು.
ಮತ್ತೆ ನೆನೆಸಿದನವನು:
ಕಾಲ ಕೈ ಮೀರಿತ್ತು.
ರಾಗ ಬರಿ ಬಿರುನುಡಿಯ ಸ್ವಾತಿಮಳೆಯಾಯ್ತು!

"ತತ್ವವನು ಜರೆಯುವಿರ?
ನಮ್ಮ ಪಿತೃಭೂಮಿಯಾ
ಮಾನಹರಣವದಾಗಿ ನೆಲಕೆ ತುಳಿದು
ಧೂರ್ತರೆಲ್ಲರು ಸೇರಿ
ಮೆರೆಯುತಿರೆ, ಪಿತೃಋಣ
ಮೊದಲೆನಲು,—ನುಡಿವರೇನಿಂತು ಹಳಿದು?"

"ನನ್ನ ನಾಡಿನ ದುಃಖ
ಹೃದಯದಲಿ ಜ್ವಲಿಸಿರಲು
ಮಾನಭಂಗದ ಕಥೆಯು ರೋಮ ರೋಮದಲಿ

ನಿಮಿರುತಿರೆ, ಈ ದೇಶ—
ಕಿಡಿ ಧರಿತ್ರಿಯೆ ಶತ್ರು—
ಏರಲೀ ಧರಿತ್ರಿಯನು ಸಮರಹೋಮದಲಿ ”

“ ನೂಕಿ ನುಗ್ಗಾಗಿಸುವೆ—
ನೆಂದು ನಾ ಪಣ ತೊಟ್ಟು
ಆ ಪಣವ ಪೂರೈಸಿ ನಿಂತೆನಿಂದು.
ಸೋಲು-ಗೆಲವುಗಳೆಲ್ಲ
ದೈವ ನಿಯಮಿಸಿದಂತೆ.
ನಾಡ ತತ್ವಕೆ ನಾವು ಹೊಂದಿ ನಿಂದು ”

“ ಕೃತಿಯ ರಚಿಸುವದೆನಲು
ಅದರೊಳೇನಿದೆ ಕುಂದು?
ಅದಕಿಂತು ಕವಿ ವ್ಯಂಗ್ಯವಾಡಬೇಕೆ?
ಮರಣ ಸಮಯದಲಿ ಸಹ
ಹಿಟ್ಲರನು ಹಿಟ್ಲರನೆ!
ಹೆಚ್ಚು ಮಾತಾಡದಿರಿ ನೀವು ಜೋಕೆ! ”

ಮತ್ತೆ ನಕ್ಕನು ಕವಿಯು:
“ ಬಾಳು ತೃಣಸಮವೆನಗೆ;
ಜೀವಿಗಳ ರಾಶಿಯನೆ ಒಕ್ಕ ನಿಂತ
ಒಕ್ಕಲಿಗ ನೀವಿರಲು
ನಿಮ್ಮೆದುರು ನಾ ಕರಿಕೆ;
ಒಂದು ಕ್ಷಣದಲಿ ಕಿತ್ತಿ ಗೆಲಬಹುದು ಪಂಥ! ”

“ ನಾ ಕರಿಕೆಯಾದರೂ
ಸತ್ಯವೇ ನನ್ನರಿಕೆ.
ನೀವೆ ಬಂದಿರಿ ನನ್ನ ನೆಲೆಯನರಸಿ.

ನೀವೆ ಬರದಿರಲಾಗ
ನುಡಿಯುತಿದ್ದೆನೆ ನಾನು ?
ಬಂದಿರಲು ನುಡಿಯುವರೆ ಸಟೆಯ ಬೆರಸಿ ? ”

“ ಕವಿಯ ಮಾತನು ಬಿಡಿರಿ,
ಅವನು ಸರ್ವಸ್ವತಂತ್ರ ;
ಅವನ ಬಾಯಿಗೆ ಭಾರಿ ಬೀಗವಿರಲು
ಹೃದಯ ಮಿಡಿವುದು ಕವಿಯು
ನುಡಿಯಲೆಳಸಿದ ಮಾತ :
ಆಘಾತದಿಂದ ಆ ಹೃದಯ ನಿಲಲು,— ”

“ ಗಾಳಿಗುದುರೆಯನೇರಿ
ಕವಿಜೀವ ನುಡಿಯುವುದು ;
ನುಡಿಗೆ ನಡೆ ಮಾರ್ಪಡುವದನು ಬಲ್ಲಿರಿ !
ನಿಮಗದನು ನಾ ಕಲಿಸ
ಬೇಕಿಲ್ಲ. ಸಾಕ್ಷಿಯಿದೆ–
ಯದಕೆ ಗೋಬೆಲ್ಸನ ಆ ವಾಗ್ವಲ್ಲರಿ ! ”

“ ಬೀಗ ತೆರೆದಾಗ ತುಟಿ
ತಾ ಮತ್ತೆ ಒರೆಯುವುದು ;
ಕಬ್ಬಿಣದ ಕೈ ಕಳಚಿ ಬೀಳಲೊಂದು ದಿನ.
ಆದರೀ ನಿರಪರಾ
ಧಿಗಳ ಕೋಟ್ಯಾವಧಿಯ
ಕೊಲಲು ನೀವ್ ನಡೆದ ದಿನವಹುದೆ ಸುದಿನ ? ”

ಕವಿಯ ವಿಷಯವ ಕೇಳಿ
ಬೆಪ್ಪಾದ ಹಿಟ್ಲರನು ;
ಕೊಲೆಯ ಮಾತನು ಕೇಳಿ ಕೆಂಪಗಾದ :

“ ಏನಿದೀ ಕೊಲೆಗೆಲ್ಲ
ನಾನೆ ಕಾರಣನೇನು?
ವರ್ಸಾಯಿಯಲಾದಂಥ ಆ ಪ್ರಮಾದ ”

“ ಅದಕೆ ಕಾರಣವೆನಿಂ;
ಹಿಂದಿನನ್ಯಾಯದಾ
ಫಲವನನುಭೋಗಿಸುವದೀ ಜಗತ್ತು.
ಆಂಗ್ಲೈತಿಹಾಸಕರು
ನಾಳೆ ಈ ವಿಷಯದಲಿ
ಏನೆಂಬರೆಂಬುವದು ನನಗೆ ಗೊತ್ತು!”

ಕವಿಯೆಂದ: “ ಹುತ್ತದಲಿ
ಸರ್ಪದಾಚೆಗೆ ಸರ್ಪ.
ಕಾರಣಗಳಾ ತಿರುಗುಮುರುಗು ಸರಪಣಿಗೆ
ಯಾವ ತುದಿಮೊದಲಿಲ್ಲ.
ವರ್ಸಾಯಿಯೆ ಕಾರಣವು
ಎಂದೆನಲ್ಲ,— ಕಾರಣವದೇನು ವರ್ಸಾಯಿಗೆ?”

“ ಮಾನವನ ಕುಣಿಸುತಿರು-
ವಾಸೆ-ಆಕಾಂಕ್ಷೆಗಳು
ಮೊದಲಿಲ್ಲ ಕಂಡವೆಂದೆನುವದೆಂತು?
ಆಂಗ್ಲನಿರೆ ಸಾಮ್ರಾಜ್ಯ-
ವಾದಿ, ಜರ್ಮನನಾದ
ತಾನು ಸಹಲೋಭಿ: ಇಲ್ಲೆನುವದೆಂತು?

“ ಆದರೂ ಈ ಪ್ರಳಯ-
ಸಂಹಾರದೊಜ್ಜೆಯನು
ಹೊರಿಸಿಲ್ಲ ನಾ ನಿಮ್ಮ ತಲೆಯ ಮೇಲೆ.

ನಿಮ್ಮನ್ನು ಹಳಿದಿಲ್ಲ
ನಿಮ್ಮ ಕೊರಳಲಿ ತಾನು
ಜಯಶ್ರೀಯು ಹಾಕಲಿಲ್ಲೆಂದು ಮಾಲೆ."

"ಈ ರುದ್ರನಾಟಕದಿ
ನೀವ್ ಒಂದು ಬರಿ ಘಟಕ.
ನಿಮಗೆ ಸಂದಿತ್ತು ನಿಜ, ಪ್ರಧಾನಪಾತ್ರ.
ಈ ನಾಟಕದ ಬ್ರಹ್ಮ-
ನಹುದು ವಿಶ್ವದ ಬ್ರಹ್ಮ.
ನೀವು ನಾಯಕ; ನಾನು ಪ್ರೇಕ್ಷಕನು ಮಾತ್ರ!"

"ಉಳಿದವರ ಹೊರೆಗಿಂತ
ನಿಮ್ಮ ಹೊರೆ ಹೆಚ್ಚಿಲ್ಲ.
ಎಲ್ಲದರ ಹೊರೆಯನ್ನು ಹೊರುವ ದೊರೆ ಬೇರೆ!
ಆದರೂ ಇದಕ್ಕೆಲ್ಲ
ನೀವು ಮುಖ್ಯ ನಿಮಿತ್ತ-
ವೆಂದು ಜನವೆಳೆಯುತಿರಬಹುದು ಮೇರೆ!"

"ಅವರ ನುಡಿಗಳಲೊಂದೆ
ನುಡಿಯು ಅನ್ವಯಿಸುವದು
ನಿಮಗೆಂದ ಕವಿ; "ಯಾವುದೆಂ"ದು ಸಿಡಿಮಿಡಿದು
ಕೇಳಿದನು ಹಿಟ್ಲರನು;
ಸಮರದೊಚ್ಚೆಯು ತನ್ನ-
ದೊಬ್ಬನದೆ ಅಲ್ಲದೆನೆ ಕವಿಯು ಮುಳಿಸಿಳಿದು."

"ನೀವು ಅಸುರರು ಎಂಬ
ಘೋಷಣೆಯಲಿದೆ ತಥ್ಯ:"—
"ಅಸುರ? ತಡೆಯಿರಿ! ನಮ್ಮ ಸಂಸ್ಕೃತಜ್ಞ

ಈ ಶಬ್ದವನು ಓದು-
ತಿರುವಂತೆ ನೆನಪಿಹುದು ;
ಏನರ್ಥ ! ಹೇಳಿ ! ನಾನಲ್ಲ ಸರ್ವಜ್ಞ ! ”

“ ರಾಕ್ಷಸರಿಗಸುರರೆಂ-
ದೆನುವ ಪರಿಪಾಠವಿದೆ. ”
“ ಏನು ? ನಾ ರಾಕ್ಷಸನೆ ? ಇದರಲ್ಲಿ ತಥ್ಯ
ಕಾಣುವುದೆ ಕವಿಗು ಸಹ ?
ವಿಪರೀತ ! ವಿಪರೀತ !
ಆರ್ಯನಿಗನಾರ್ಯನೆಂಬುವ ಅಸತ್ಯ. ”

“ ಕವಿಯಿತೇ ನಿಮ್ಮನ್ನು ?
ಇಲ್ಲಿ ಬಾ. ಓ ಹಿಮ್ಲರ್ !
ಅಯ್ಯೋ ! ಹಿಮ್ಲರನಿಲ್ಲ. ಏನು ಘಾತ !
ಇಲ್ಲದಿರೆ ನರಕ ಯಾ-
ತನೆ ನಿಮ್ಮದಿರುತ್ತಿತ್ತು.
ಇರಲಿ, ಕೇಳುವೆನೀಗ ನಿಮ್ಮ ಮಾತ. ”

ಕವಿಯೆಂದ : “ ಹಿರಿ ಸ್ಫೂರ್ತಿ,
ಚಾರಿತ್ರ್ಯ, ಅಭಿಮಾನ,
ಧೈರ್ಯ, ಸಾಹಸ, ಸಂಯಮವು ನಿಮ್ಮಲಿ
ಮನೆಮಾಡಿಕೊಂಡಿಹವು.
ಹಂಚಿಕೆಯ ಜಗಕೆಲ್ಲ
ಸಾರಿ ಸಾಧಿಸುವಲ್ಲಿ ನೀವ್ ಕಡುಗಲಿ. ”

ಸರ್ವಾಂಗ ಪರಿತ್ಯಾಗಿ-
ಯಾಗಿ ಪಿತೃಭೂಮಿಯನು
ನೀವು ಸೇವಿಸಲೆಸಗಿದದ್ಭುತದ ರೀತಿ

ಜಗವ ವಿಸ್ಮಯಗೊಳಿಸಿ
ಮೆರೆಯುವದು. ಯುಗಯುಗದ-
ಲೊಮ್ಮೆ ಬಂದೊದಗುವುದು ಈ ಪ್ರತೀತಿ !"

"ಭೂಗೋಲ ವರ್ಗದಲಿ
ಭೂಗೋಲುಪಾಧ್ಯಾಯ
ಗೋಲವನು ತಿರುಗಿಸುವ ಅಂದ, ಸ್ವಚ್ಛಂದ
ರಾಜ್ಯಗಳ ನೀವುರುಳಿ-
ಸಿರುವ ಮೋಡಿಯಲಿಹುದು.
ನಿಮ್ಮ ವೇಗದ ಮುಂದೆ ವಾಯುಗತಿ ಮಂದ !

"ಅಲ್ಪಾವಧಿಯೆ ಇರಲಿ ;
ನಿಮ್ಮ ಹಿರಿ ಸಂಕಲ್ಪ
ತಾಯ್ನೆಲದಿ ನಿಲ್ಲಿಸಿದ ಕೀರ್ತಿಧ್ವಜವ
ಜರ್ಮನಿಯು ಮೊದಲು ಕಂ-
ಡಿರಲಿಲ್ಲ ; ಮುಂದಿನ್ನು
ಕಾಣದದು, ಮರೆಯಿಸುವುದೇಕೆ ನಿಜವ ?"

ಹಿಟ್ಲರನು ತಲೆದೂಗಿ
ಕವಿನುಡಿಯ ಕೇಳಿದನು
ಒಂದು ಕ್ಷಣ ತನ್ನ ದುಃಖವನು ಮರೆತು ;
ಕುದಿಯುವಂತಃಕರಣ-
ವನ್ನು ಒಳಹೊಕ್ಕು ಕವಿ
ಅಂತರಂಗದ ಮಾತನೊರೆಯುತಿಹುದರಿತು.

ಮತ್ತೆಂದ ಕವಿ : "ಆದ-
ರಿದರಾಸುರೀ ವೃತ್ತಿ
ಅತಿಮಾನವೀಯ ಗುಣಗಣವನಾಳಿ

ತನ್ನಂಕಿತದಲಿಟ್ಟು
ಮೆರೆಯ ಬಯಸಿತು. ಅಂತೆ
ಈಗ ಸೋಂಕಿತು ನಿಮ್ಮನಿಂಥ ಬಿರುಗಾಳಿ!"

"ನಿಮ್ಮ ತಾಯ್ನೆಲ ನಿಮಗೆ
ತಂದೆನಾಡಾಗಿರಲು
ಉಳಿದವರಿಗಿಲ್ಲವೇ ತಾಯಿನಾಡು?
ಉಳಿದವರ ಪಿತೃಗಳನು
ತಮಸಿನಲಿ ನೂಕುತ್ತ
ತನ್ನವರು ಮೆರೆವುದೆಂದೆಣಿಸುವವ ಕಾಡು."

"ಒಬ್ಬೊಬ್ಬರನ್ಯಾಯ-
ಕ್ಕಿಡಿ ಯಹೂದಿ ಜನಾಂಗ-
ವನ್ನು ಬಲಿಕೊಡಲು ನಡೆದಂಥ ನೀವು
ಕೇಳಿ ಬಲ್ಲಿರ, ಎಲ್ಲ
ಮಾನವರನೊಂದೆ ಕುಲ-
ದವರೆಂಬ ಮಾತನ್ನು? ಸಾವು-ನೋವು"

"ಎಲ್ಲರನು ಮುಟ್ಟುವಾ
ರೀತಿಯೊಂದೇ ಇಹುದು":—
ನುಡಿದ ಹಿಟ್ಲರನಿದಕೆ: "ಇರಲೊಲ್ಲದೇಕೆ!
ಜ್ಯೂ ಜನರ ಮಾತೊಂದ
ಬಿಟ್ಟು ನುಡಿಯಿರಿ ನೀವು!
ಜ್ಯೂ—ಧೂಮಕೇತುವೆತ್ತಿದ ಪತಾಕೆ!"

ಕವಿಯೆಂದ: "ಇರಲಿರಲಿ,
ದೇಶಹುದ ಸ್ವೀಕರಿಸಿ.
ನೋಡಿಕೊಳುವಳು ಭೂಮಿತಾಯಿಯುಳಿದುದನು!

ಸಾಮ್ರಾಜ್ಯ-ಸಂಪದಕೆ
ನಾಡ ಬಾಳ್ವೆಯ ಹೂಡಿ
ಉಳಿದ ನೆಲೆ ಬತ್ತುವೊಲು ನೀವು ನಡೆದುದನು ”

“ ಜನವೆಂತು ಮರೆಯುವದು ?
ದೇವನೌರಸರಾದ
ಮಾನವರ, ಪಶುವಂತೆ ನಡೆಸಬೇಕೆ ?
ಒಂದು ಗುಂಪನು ಕಟ್ಟು-
ತದರ ಹೆಚ್ಚಳಕಾಗಿ
ಉಳಿದ ಸಮುದಾಯಗಳ ಕೆಡಿಸಬೇಕೆ ? ”

“ ಅದಕಂತೆ ನೀವಸುರ. ”
“ ಹೇಗೊ ? ” ಹಿಟ್ಲರನೆಂದ.
“ ವ್ಯಾಖ್ಯೆ ಹೀಗಿರೆ ಅಸುರನೆನಲು ಹಿಗ್ಗು !
ಪಾಃಲಿಫೀಮಸನಂತೆ
ಜನಜಂಗುಳಿಯ ತಿನುವ
ಮಾನಿಸನೆ ಅಸುರನೆಂದೊಂದು ಸಿಗ್ಗು ”

“ ನನ್ನ ಮನ ಹಿಡಿದಿತ್ತು,
ಯಾರು ಏನೆನಲೇನು ?
ನನ್ನ ಹಿರಿ ಅನಿಸಿಕೆಗಳಂತೆ ನಡೆದೆ.
ಆಂತರಿಕ ಪ್ರೇರಣೆಯ
ಪೂರಣಕೆ ಹಾತೊರೆದು
ನನ್ನ ಭಕ್ತಿಯು ತಂದ ಭುಕ್ತಿಯನು ಪಡೆದೆ. ”

“ ಇಷ್ಟೆಲ್ಲ ಹೇಳಿದಿರಿ.
ನಾನೊಂದ ಹೇಳುವೆನು.
ಇಳೆಯೊಳಿರುವೀ ಕ್ಷುದ್ರ ಜಂತುಗಳನು

ದುರ್ದಮ್ಯ ವಿಷವಾತ-
ದಿಂದ ಮುಗಿಸುವದೆಂದೈ
ಸುವ್ವಿಗೆಯ್ಯುತ ಹೊಸ ಪ್ರಕಾರಗಳನ್ನು— ”

“ ಹೊಸತೊಂದು ಕುಲವನ್ನು
ನಾನು ಮಡಿವುದರಲ್ಲಿ.
ಆದರದಕೆನ್ನಾತ್ಮ ಒಪ್ಪಲಿಲ್ಲ.
ಅಂತೆ ಬದುಕಿತು ಜಗವು.
ಪ್ರಳಯಾನಿಲನು ತಾನು
ಇಲ್ಲದಿರೆ ಗುರಿಯೆಂದಿಗೂ ತಪ್ಪಲಿಲ್ಲ ! ”

ಕವಿಯೆಂದ: “ ಹೊಸ ಜೀವಿ-
ತದ ಚಿಹ್ನವಿದು, ನೋಡಿ !
ನಿಮ್ಮ ಅತಿಮಾನವತೆಯಾಳವಳೆದು
ಅದ ಸಮೀಪಿಸುತಿಹುದು
ದಿವ್ಯ ಚೇತೋಹಂಸ
ಸುರರ, ಅಳ್ಳದೆ ನಿಮ್ಮ ಮನದಿ ಹೊಳೆದು ”

“ ಬಾಳ ಕಿರಣವು, ಬಾಳ
ಗುರಿಯನ್ನು ಸಾಧಿಸಿತು.
ಬಾಳ ದೇವಿಯ ಭಕ್ತನಸುರನೊಬ್ಬ.
ನಿಮ್ಮಾಸುರೀ ವೃತ್ತಿ
ತಾ ಕಳಚಿ ಬೀಳ್ವಂದು
ನನಗೆ ಮತ್ತೆನ್ನ ಕಪಿಕುಲಕೆ ಹಬ್ಬ ! ”

“ ಇರಬಹುದು ” ! ಎಳಲ್ಪಣೆ-
ಗೊಂಡು ಹಿಟ್ಲರನೆಂದ.
“ ಇನ್ನು ನಡೆವೆನು ನಾನು ಮರಣದೆಡೆಗೆ.

ನಿಮ್ಮ ಸಿದ್ಧಾಂತಗಳ-
ಗೊಪ್ಪಲಾರೆನು ನಾನು.
ಒಪ್ಪಾರೆ ನಿಮ್ಮಭಿಪ್ರಾಯ, ಕಡೆಗೆ ? "

" ಮಾತನೊಪ್ಪದೆ ನನ್ನ-
ಭಿಪ್ರಾಯ ನಿಮಗೇಕೆ ?
ಅದರಿಂದ ನಿಮಗಾವ ತೃಪ್ತಿ"ಯೆಂದ
ಕವಿಯು : ಹಿಟ್ಲರನೆಂದ :
" ಇದು ನನ್ನ ಸಿದ್ಧಾಂತ.
ಕವಿ—ಜನದ ನೇತೃ. ಆ ದೀಪ್ತಿಯಿಂದ "

" ಜನತೆಯಂತಃಕರಣ-
ವಿಹುದು ಪ್ರತಿಬಿಂಬಿತವು.
ಎಲ್ಲ ಕಾಲದ ಜನದ ನೋಟವಲ್ಲಿ
ಅಹುದು ಕೇಂದ್ರೀಕೃತವು.
ಇದುವೆ ಕವಿಗಿಹ ಸ್ಥಾನ
ನಾ ಕಲ್ಪಿಸಿಹ ಲೋಕದಾಟದಲ್ಲಿ. "

" ನಿಮ್ಮ ಸಿದ್ಧಾಂತಗಳ-
ವೇನೆ ಇದ್ದರು ಸರಿಯೆ !
ಅವು ಅಳಿದ ಮೇಲು ಕವಿ ಬಾಳಬಲ್ಲ !
ಇರಲಿ. ಒರೆಯುವೆ ನನ್ನ
ಮನವನ್ನು, " ಕವಿಯೆಂದ.
" ನಿಮ್ಮ ಯುಗದಲಿ ನೀವು ಭುವನೈಕಮಲ್ಲ.— "

" ರೆಂದು ಹೆಸರುಳಿಯುವದು.
ಆ ಸಿಕಂದರ ಹ್ಯಾನಿ—
ಬಾಲ್ಮ, ಸೀಜರ್ರ, ನೆಪೋಲಿಯನರೆಡೆಗೆ

ಚಿರಜೀವಿ ಪಟ್ಟವಿದೆ.
ನಿಮಗೆ ಜನರೆನ್ನುವರು:
‘ವೀರನಂತೆಯೆ ಬಾಳ ಕಟ್ಟಿದಂತೆಗೆ’”

“‘ವೀರನಂತೆಯೆ ಬದುಕಿದ.
ತನಗಿದ್ದ ಬೆಳಕಿನಲಿ
ತನ್ನ ಬಲವೆಲ್ಲವನು ವಿನಿಯೋಗಿಸಿ
ತನ್ನ ಕನಸನು ನಂಬಿ
ನಡೆಯಲು ಹವಣಿಸಿದನವ;
ಕೊನೆಗೆ ವಿಧಿ ತಂದುದನನುಭೋಗಿಸಿ.’”

“‘ಸೂರ್ಯ ಚಂದ್ರಗೆ ಸಹ
ಕಪ್ಪು ಕಲೆಯಿರದಿಲ್ಲ.
ಹಿಟ್ಲರನ ಕಪಟವಿತ್ತು ರಾಹು-ಗಪ್ಪು
ಕೇತು-ನೀಲಿಯು ಅವನ
ದಿವ್ಯ ತೇಜವ ಮುಚ್ಚಿ.
ಚರಿತವವಿರಳವಾಗಿ ತಪ್ಪು-ಒಪ್ಪು.’”

“‘ವಿಜ್ಞಾನಯುಗದ ಅತಿ-
ಮಾನವನು ಹಿಟ್ಲರನು;
ಸಾಹಸದ ಸಂಕೇತ,—ಸಾಧನವು; ಗುರಿಯು
ಹೇಯವಿರೆ ಸಾಧನಗ-
ಳನು ಹೇಯವಾಗಿಸಿತು.
ಸೃಷ್ಟಿಯದ್ಭುತಗಳಲ್ಲಿದು ಒಂದು ಪರಿಯು!’”

ಮೇಲಿದ್ದ ಹಿಟ್ಲರನು.
ಸಂತೃಪ್ತಿಯೊಂದು ನಗೆ
ಅವನ ತುಟಿಗಳ ಮೇಲೆ ಸುಳಿಯುತಿತ್ತು.

ಕವಿಯು ಕೈ ಕುಲುಕಿಸಿದ.
ಕವಿಗೇನು ಕೊಡಲಿಲ್ಲ-
ವೆಂಬ ಯೋಚನೆಗೆ ಎದೆಯಳುಕುತಿತ್ತು.

ಇದ ತಿಳಿದ ಕವಿಯೆಂದ:
“ಬೇರೆ ಯೋಚನೆ ಬೇಡ.
ಈವ ಬ್ರೌನಳು ತೀರಿಹೋದ ಮೇಲು
ನೀವಾಗಿ ಭೇಟಿಯನು
ಕರುಣಿಸಿದ ಮಾನವನು
ನಾನೆಂಬ ಕೀರ್ತಿಯೇ ನನ್ನ ಪಾಲು!”

ಬೀಳ್ಕೊಳುತ ಕವಿಯನ್ನು
ಮುಂದೆ ಹಿಟ್ಲರ ನಡೆದ
ಸಾವು ಕವಿದಿರುವ ಪಿತೃನಗರಿಯಲ್ಲಿ
ಸಾವನಪ್ಪಲು; ಅಪ್ಪಿ
ಅಮರನಾಗಲು; ಅಸುರ-
ನೆಂಬ ನಾಮಾಂಕಿತದ ಹೊಗರಿನಲ್ಲಿ.

---

## ೧. ಸತ್ಯಾಗ್ರಹ

ನಾನು ನೀನು ಅವನು ಕೂಡಿ
ಒಂದು ಆಟವಾಡುತ
ಮತದ ದಾರಿಯನ್ನೆ ತುಳಿದು
ಅನೃತವನ್ನು ದೂಡುತ
ಒಂದು ನಿಂತೆವಿಲ್ಲಿಗೆ
ಮುಂದೆ ಮತ್ತದೆಲ್ಲಿಗೆ
ದೈವ ಕರೆವುದಲ್ಲಿ ನಡೆಯೆ
ಸದಾ ಸಿದ್ಧರಿರುವೆವು ;
ಆತ್ಮಯೋಗನಿಯಮದಿಂದ
ಅದಕೆ ಒಪ್ಪಿರುವೆವು.

ಬಾಳ ಮುಂಬಾನದಲ್ಲಿ
ಕನಸನೊಂದು ಕಂಡಿದೆ
ಜೀವಕಾಸಾರದಲ್ಲಿ
ಮಿಂದು ತಿರುಳುಗೊಂಡಿದೆ
ನಾವು ಹಾಡಿ ಕಲಿದೆವು.
ಚೆಲುವ ನೋಡಿ ನಲಿದೆವು.
ನೆನಸು ಬಂದು ಕೇಳತಾಗ :
ಕೊಡುವಿರೇನು ಶುಲ್ಕವ ?
ಸತ್ಯ ಬಂದು ಕೇಳುತಿತ್ತು :
ಉಡುವಿರೇನು ವಲ್ಕವ ?

ನಗೆ ಮುಗುಳಲು ನಾವೆಂದೆವು :
ಕನಸು ನಮ್ಮನೆತ್ತಿದೆ.
ನಮ್ಮ ಹೃದಯದಲ್ಲಿ ತೇಜ-
ಬೀಜವನ್ನು ಬಿತ್ತಿದೆ.
ಕನಸನಲ್ಲಗಳೆವರೆ ?
ಕಳೆದು ಮುಂದೆ ಬಾಳ್ವರೆ ?
ಅದಕೆ ನಾರುಬಟ್ಟೆಯುಡಲು
ನಾವು ಸದಾ ಸಿದ್ಧರು.
ನನಸನೆದುರುಗೊಳ್ಳಲಾತ್ಮ-
ಯೋಗದಿಂದ ಬದ್ಧರು.

ನನಸೆಂದಿತು : ಕನಸೆ ಇರದ
ಅಮಾವಾಸ್ಯವೊಂದಿದೆ.
ಉಷಃಕಾಲ ಗತಿಸೆ ಮುಂದೆ
ಉರಿಬಿಸಿಲಿನ ಹಗಲಿದೆ.
ಹೇಳಿರೀಗ : ಹಗಲು ಬೇಕೊ ?
ಮೋಡಗವಿದ ನಿಶೆಯು ಸಾಕೊ ?
ಅದಕೆಂದೆವು : ಬಾಳಿನ ಗತಿ
ಮುಂದು ಮುಂದು ಮುಂದಕೆ.
ಹಗಲೆ ಬೇಕು. ಎಂದೆಂದಿಗು
ತಿರುಗಲಿಲ್ಲ ಹಿಂದಕೆ.

ನನಸೆಂದಿತು : ಅಂತೆ ಇರಲಿ ;
ಉರಿಬಿಸಿಲಲಿ ಮಲಗಿರಿ.
ಶರಪಂಜರ ಶಯ್ಯೆ ನಿಮಗೆ ;
ಕತ್ತಲುಮನೆ. ತೊಲಗಿರಿ.
ಬಾರದಲ್ಲಿ ಒಂದು ಕಿರಣ.

ಅಲ್ಲ ಜನನ್ನ, ಅಲ್ಲ ಮರಣ :—
ಜೀವನ್ಮೃತರಂಥ ಸ್ಥಿತಿಯ-
ದಿನ್ನು ನಿಮ್ಮದಿರುವದು.
ದುಃಖಪರಂಪರೆಯ ನಿಮ್ಮ
ಜೀವನದಲಿ ತರುವದು.

ಆಗ ಕಣ್ಣು ತಮಗೆ ತಾವೆ
ಆಪ್ರವಿರಲು ದ್ರವಿಸಲು
ಹೃದಯ ತಾನು ಉನ್ನಯನದ
ಊರ್ಮಿಯನನುಭವಿಸಲು,—
ಹಿಗ್ಗಿದಲ್ಲ; ದುಗುಡವಲ್ಲ.
ಮತ್ತೆ ಹೇಳದೇನಿದೆಲ್ಲ?
ಅಶ್ರುಜಲವಿದೇತಕೆಂದು
ಒಂದು ನಿಮಿಷ ಕುರಿತೆವು.
ಜೀವಾತ್ಮರ ಪ್ರೇಮಭೇಟಿ
ಮಂಗಳವೆಂದರಿತೆವು.

ಸುಡಿದೆವಾಗ ಓ! ಸನಸೆ!
ವಿಧಿಯ ಕಡಲ ಸುಳಿಯಲಿ
ತಿರುಗುತಿಹುದು ಜೀವಬಿಂದು:
ಅಳಿಯಲಿ, ಉಳಿಯಲಿ:
ಒಳಿತು-ಕೆಡಕು, ದುಃಖ-ಸುಖ,—
ಗಂಡಭೇರುಂಡ ಮುಖ:
ಒಂದೆ ಹಕ್ಕಿ ಒಂದೆ ಹಾಡು,—
ನಮ್ಮ ಬಾಳಿದಂತಿದೆ.
ಆತ್ಮಯೋಗವುಳಿದುದೆಲ್ಲ
ಹಾಳು ಕಂತೆಯಂತಿದೆ.

ದ್ವಂದ್ವಗಳನದೆಂದೊ ತೊರೆದು
ನಾವು ಮುಕ್ತರಾದೆವು.
ವಿಧಿಯ ದೃಶ್ಯಕಾವ್ಯರಸದ
ರಸಿಕ ಭಕ್ತರಾದೆವು.
ಬೇಕು ಸುಖವು ತರುವ ಶಾಂತಿ.
ಬೇಕು ದುಃಖ ಪಡೆವ ಕಾಂತಿ.
ಮಂದಾನಿಲ ಝಂಝಾನಿಲ-
ರೊಡನೆಯೆ ನಾವ್ ಕುಣಿದು
ತೆರೆಯಾಗಲು ನೊರೆಯಾಗಲು
ಬಂದಿರುವೆವು ಮಣಿದು.

ಆದಕೆ ಕೇಳು ಓ ! ಮನಸೇ !
ನಿನಗೆ ಶ್ರೀದ ಬರೆ ಕೊಡು.
ಕತ್ತಲುಮನೆ ಮೊತ್ತದಡವಿ,—
ಎತ್ತಲಾದರೊಯ್ದುಬಿಡು.
ಹೂವು ಮಾರಿದೆಡೆಗೆ ಹುಲ್ಲು
ಮಾರಬಾರದೆಂಬ ಗುಲ್ಲು
ನಮ್ಮದಲ್ಲ. ಮನೆಯು ಮಾರು
ಇಲ್ಲವಾತ್ಮಯೋಗಿಗೆ.
ಇಹದೈಸಿರಿಯೆಲ್ಲ ತೃಣವು
ನಿಸ್ಪೃಹನಿಗೆ ತ್ಯಾಗಿಗೆ.

ನಾನು ನೀನು ಅವನದಿಂತು
ಇಲ್ಲಿಗಿಂದು ಬಂದೆವು.
ಮನಸು ವಿಧಿಸಿದಂಥ ಶಿಕ್ಷೆ-
ಯನ್ನು ಹೊಂದಿ ನಿಂದೆವು.
ಬಂದು ನಿಂತೆವಿಲ್ಲಿಗೆ.

ಮುಂದೆ ಮತ್ತದೆಲ್ಲಿಗೆ
ದೈವ ಕರೆವುದಲ್ಲಿ ನಡೆಯೆ
ಸದಾ ಸಿದ್ಧರಿರುವೆವು.
ಆತ್ಮಯೋಗನಿಯಮದಿಂದ
ಅದಕೆ ಬದ್ಧರಿರುವೆವು.

ಅವಗೆ ನಿನಗೆ ಕತ್ತಲುಮನೆ
ಮೊಸರುಭತ್ತದೂಟವು.
ಬೈಗು ಬೆಳಗಿನಾಸರಿಲ್ಲ;
ಇಲ್ಲ ಚೆಲುವ ನೋಟವು.
ಇಲ್ಲವಲ್ಲಿ ಓ! ಗೆಳೆಯ!
ಮನಸ್ಸು ಚಿಗುರುವಂತೆ ಕೆಳೆಯ
ಹಣಿಸಿ ಜೀವವನ್ನು ತಣಿಸಿ
ಮುಕ್ತಿಯನ್ನು ಕಾಂಬರು.
ಸ್ವಾರ್ಥಸಾಧುಗಳೇ ಅಲ್ಲಿ;
ಇಲ್ಲ, ಬರಿಯ ಹುಂಬರು.

ಇದಕೊ! ನನಗೆ ಧಾರುಣಿಯೇ
ದಾರುಣವಿಹ ಸೆರೆಮನೆ.
ಹೂವ ತೋರಿ ಮುಳ್ಳುಮುರಿವ
ಮಳ್ಳಾಟದ ತಂಗುವನೆ.
ಒಲವ ಹಗೆಯು ಕೊಲುವದಿಲ್ಲಿ.
ಅನ್ಯಾಯವು ಮಿಗುವದಿಲ್ಲಿ.
ಸೌಂದರ, ಸುಖ, ಸಂಪದವದು
ಮಿಂಚಿನಂತೆ ಕಳೆವುದು.
ಕತ್ತಲೆಯೊಂದಚಲವಾಗಿ
ವಿಂಧ್ಯದಂತೆ ಬೆಳೆವುದು.

ನಾನು ನೀನು ಅವನು ಕೂಡಿ
ಕರೆದ ನನಸು ಬಂದಿದೆ.
ತನ್ನಳವಿನ ಗುರಿಯೊಳಿರುವ
ಶಿಕ್ಷೆಯನ್ನು ತಂದಿದೆ.
ಅದನೆ ಎದುರುಗೊಳ್ಳುವಾ.
ಉಳಿದ ಮಾತ ತಳ್ಳುವಾ.
ಮುಂದದೊಂದು ದಿನಕೆ ಫಲಿಸ-
ಬಹುದನಂತಸ್ಪರ್ಶನ!
ಕಣ್ ಪುನೀತವಾಗಬಹುದು
ಲಭಿಸೆ ದಿವ್ಯ ದರ್ಶನ.

ಕಣ್ಣೆ ಬೇರೆಯಾಗಿ ಮಣ್ಣಿ-
ನಲ್ಲಿ ಕೈಲಾಸವ,
ಮುಗಿಲ ಹೂವಿನಲ್ಲಿ ಮಲ್ಲಿ-
ಗೆಗಳ ಮಂದಹಾಸವ
ಕಂಡು ಭೂಮಿಯಿರೆ ನಂದನ
ಹೃದಯದ ಹರ್ಷಸ್ಪಂದನ
ಮೂಲೋಕಕೆ ಮುನ್ನುಗ್ಗಿರೆ
ಮೃದುಮಧುರವು ನನಸು.
ಆತ್ಮನ ಅರುಣೋದಯವರಿ
ಮುಗಿದಿರುವದು ಮನಸು.

ನಾನು ನೀನು ಅವನು ಕೂಡಿ
ಒಂದು ಆಟವಾಡುತ
ಋತದ ದಾರಿಯನ್ನೆ ತುಳಿದು
ಅನೃತವನ್ನು ದೂಡುತ
ಬಂದು ನಿಂತೆವಿಲ್ಲಿಗೆ.

ಮತ್ತೆ ಮುಂದದೆಲ್ಲಿಗೆ
ದೈವ ಕರೆವುದಲ್ಲಿ ನಡೆಯೆ
ಸದಾ ಸಿದ್ಧರಿರುವೆವು.
ಆತ್ಮಯೋಗನಿಯಮದಿಂದ
ಅದಕೆ ಬದ್ಧರಿರುವೆವು.

—೧೯೪೨

## ೨. ಕರ್ಮಯೋಗಿ

ಪಂಚೆಯುಟ್ಟು ಪಂಚೆಹೊತ್ತು
ಮಿಂಚಲೊಂದು ಸತ್ಯವೆದುರು
ಹೊಂದಲದನು ಪಂಚಪ್ರಾಣಗಳನೆ ನೀನು ನೀಡಿದೆ.
ಪಂಚಮಹಾಭೂತವಿತ್ತ
ದೇಹವಿರಲು ಯಜ್ಞಪಶುವು
ನಿರ್ಭಯ-ನಿರ್ವೇಗನಾಗಿ ರಾಷ್ಟ್ರಯಜ್ಞ ಹೂಡಿದೆ.

"ದೊರೆಯೆ ! ನಿನ್ನ ಸೇವೆಗೆಯ್ವ
ತವಕವಿಹುದು; ನಿಷ್ಠನೆಂ"ದೆ
"ಸೇವೆಗೆಯ್ಯುತಿರಲು ಕವಿದು ಬರುವ ಸಾವು ನೋವಿಗೆ;
ಬಂದ ಶ್ರುತಿಯ ಕೃತಿಯುಲಿಸ-
ಲೆಂದೆ ಬೆಳಕು ಕಂಡೆ; ದೊರೆಯ
ನಿರ್ದೇಶವ ನಿರ್ವಹಿಸುತ ಮರಳಿ ಬರುವೆ ರೇವಿಗೆ."

ಆತ್ಮದೇವನೆಂದ: "ನಾಡು
ಮುಕ್ತಿಗಾಗಿ ಮೊರೆಯುತಿಹುದು
ನಾಡ ಪಾಡಿಗಾಗಿ ನಿನ್ನ ಬಾಳ್ವೆಯಿರಲಿ ಮೀಸಲು.
ಅದುವೆ ನಿನ್ನ ಕರ್ಮ-ಧರ್ಮ-
ವದುವೆ ನಿನ್ನ ಜನ್ಮಕಾರ್ಯ.
ನಿನ್ನ ಪಕ್ವದೆಸೆಗೆ ಬೇರೆ ದಾರಿಯಿಲ್ಲವೀ ಸಲ."

ಅಂತೆಯೆ ಇರಲೆಂದು ನೀನು
ಪಂಚೆಯುಟ್ಟು ಪಂಚೆ ಹೊತ್ತು
ಯಜ್ಞಕಂಕಣವನು ತೊಟ್ಟೆ. ಯಜ್ಞಶಾಲೆಯಾಯಿತು

ನಿನ್ನ ಮನೆಯು. ಇದ್ದುಬಿದ್ದು-
ದೆಲ್ಲ ಹವ್ಯಕವ್ಯವೆಂದೆ.
ನಾಡ ರಣಾಂಗಣವೆ ನಿನ್ನ ಕರ್ಮಶಾಲೆಯಾಯಿತು.

ಮಡದಿ-ಮಕ್ಕಳೊಲವು ಕರೆಯ-
ಲೊಂದೆ ಗಳಿಗೆ ಯೋಚಿಸಿದ್ದೆ;
ಮುಂದಹಾಸ ಮಿನುಗಲೆಂದೆ: “ನನ್ನ ಭಾಲಲೋಚನ
ಕಾಣುತಿರುವದೊಂದೆ ಕನಸು;
ಹೃದಯ ನೆನೆವುದೊಂದೆ ನೆನಸು:
ಬಾಳ ಸಾರ್ಥಕತೆಯ ತರುವ ಭಾರತದ ವಿಮೋಚನ.”

“ಅಲ್ಲವೆನ್ನ ತಡೆಯಲೆಂದು,—
ಕೂಡಿ ಜೊತೆಗೆ ನಡೆಯಲೆಂದು
ಮಡದಿ ನನ್ನ ಕೈಯ ಹಿಡಿದಳಗ್ನಿಯಿರಲು ಸಾಕ್ಷಿಯು.
ಜೀವ ಯಜ್ಞಪುರುಷನಿರುವೆ-
ನೆಂದು ನೋಂತ ಕಾಲ ಪ್ರಾಪ್ತ-
ವಿರಲು ಸಪ್ತಪದಿಯ ಮರೆವಳೆಂತು ಕಾಮಾಕ್ಷಿಯು?”

“ಹುಟ್ಟಿಬಂದ ಮಕ್ಕಳೆನ್ನ
ಕಟ್ಟಲೆಂದು ಬಂದರೇನು?
ಹುಟ್ಟಿಬಂದು ಕಟ್ಟಿ ತಂದರೊಡನೆ ಬುತ್ತಿಗಂಟನು.
ಸದ್ಯೈವ ಜೀವಕೊಂದು ದೈವ-
ವೊಂದು ಭೋಗವಿರುವದುಂಟು;
ಅವರ ಭಾಗ್ಯವವರ ಭೋಗ್ಯ; ಮೀರಿರುವದು ನಂಟನು.”

ಇಂತು ಮಡದಿಯೊಲವ ಪಡೆದು
ಮಕ್ಕಳನ್ನು ತೆಗೆದಪ್ಪುತ
ದೇವರವಿವು ನಿನ್ನ ಮಕ್ಕಳಲ್ಲವೆಂದು ನಡೆದಿಹೆ.

ಮೋಹಮಮತೆಗಳ ಕಂಬನಿ
ಕಣ್ಣುಕುಣಿಕೆಯಲ್ಲಿ ಸುಳಿದು
ಒರಲು ಕಣ್ಣನೊರಸಿ ನೀನು ಮೋಹವನ್ನು ತೊಡೆದಿಹೆ

ನಿನ್ನ ಮನವ ಕೊಂಡ ಮತದ
ಸಂಪ್ರದಾಯಗಳನು ಮುರಿದು
ಹಿಡಿದ ವ್ರತವದೊಂದೆ ನಿನ್ನ ಮತ-ಧರ್ಮಗಳೆಂದಿಹೆ.
ಅಡುಮನೆಯಲಿ ಮಡಿ-ಮೈಲಿಗೆ;
ಸೆರೆಮನೆಯೊಳಗೆಲ್ಲ ಮಡಿಯು;
ನಾಡೊಡತಿಯ ಪೂಜೆಯೊಂದೆ ಕುಲಕರ್ಮವದೆಂದಿಹೆ.

ಮರಣಕೆಂದು ಹರಣ ಸಿದ್ಧ;
ಸ್ವಾತಂತ್ರ್ಯಗಳಪಹರಣವು
ಮರಣವಿರಲು ಮತ್ತೆ ಬೇರೆ ಮರಣವಾವುದೆಂದಿಹೆ.
ಹೂವು-ಮೊಗ್ಗೆ ಮುಗಿವ ತೆರದಿ
ನಾಡಸೇವೆಯಲ್ಲಿ ನಿನ್ನ
ಬಾಳ ಸುಮನ ಮುಗಿಯೆ ಬೇರೆ ಕರಣವಾವುದೆಂದಿಹೆ.

“ತಾಯಿ ತೂಗಿ ದಣಿಯುತಿರಲು
ನಿದ್ರೆಗೆಯ್ಯದಳುವ ಕೂಸಿ-
ನಂತೆ ನರನು ಸಾವಿಗಂಜಿ ಸಾಯುತಿರುವನು.
ತಾನು-ತನ್ನದೆಲ್ಲವೆಂಬ
ಭಾನ ಮುಂದುಗಾಣದಿರಲು
ಜೀವವಳುಕುತಿರಲು ನಿತ್ಯ ನೋಯುತಿರುವನು.”

“ಮರಣಕಿಂತ ನೋವು ಕಠಿಣ.
ಯಮಯಾತನೆ ಪಡುವ ಕ್ರಿಸ್ತ-
ಕೆಲವು ನಿಮಿಷ ದೇಹಸಂಕಟವನು ಸಹಿಸದೆ

ಬಳಲಲಿಲ್ಲವೇನು ? ನನ್ನ
ದೈವವೇನೊ ದೇವ ಬಲ್ಲ.
ದೇವ ಕರುಣೆಯಿರಲು ಜೀವ ನಿರ್ವಹಿಸದೆ ”

“ ಬಂದ ನೋವನೆಲ್ಲ ? ಅಂತೆ
ಮುನ್ನಡೆದೆನು ತೊಲಗಿ ಚಿಂತೆ.
ಕರ್ಮಮಹತಿಯನ್ನು ನೆನಿಸಿ ಧೈರ್ಯಗೊಂಡೆನು.
ಮುಂದೆ ನಡೆವ ದಾರಿಯಲ್ಲಿ
ಸೂಸಿ ಹಾಸುತಿರವದೊಂದು
ಬೆಳಕು ಕಂಡು ಕತ್ತಲಲ್ಲು ಸ್ಥೈರ್ಯಗೊಂಡೆನು. ”

“ ನಾಡಿನೆಲ್ಲ ಮೂಲೆಗಳಲಿ
ಜನೇಶ್ವರಿಯ ಹೃದ್ಗತವನು
ಬೀರಿ ದೇಹ ಬವಣೆಗೊಳಲು ಜೀವ ಕಾಂತಿವೆತ್ತಿತು ;
ಸ್ವಾರ್ಥ-ಪ್ರತಿಷ್ಠೆಗಳ ತೊರೆದು
ನಾಯಕತ್ವವನ್ನು ಮರೆದು
ಸವಚೇತನದೊಂದು ಚೆಲುವನೆಲ್ಲ ಕಡೆಗೆ ಬಿತ್ತಿತು. ”

“ ಮುಂದಾಳುಗಳಾರೆ ಇರಲಿ ;
ಅಗ್ರಪೂಜೆಯವರ್ಗೆ ಬರಲಿ.
ಪಡಿವಳ ನಾನೋಲೆಕಾರ ಬಡಪಾಯಿಯು ;
ಆತ್ಮವೆನ್ನ ಚಕ್ರವರ್ತಿ ;
ಆತ್ಮವೆನ್ನ ಕೊಡುಗೈದೊರೆ ;
ಆತ್ಮವೆನ್ನ ನಾಯಕನೈ ; ದಳವಾಯಿಯು. ”

“ ಗೆಲುವು ಬರಲಿ ; ಬಾರದಿರಲಿ ;
ನಿತ್ಯ ನಲಿವುದೆನ್ನ ಜೀವ ;
ಅಚಲಚಿತ್ತನಾಗಿ ಕರ್ಮನಿರತನಾಗಿಹೆ ;

ಇದುವೆ ಗೆಲುವು; ಬೇರೆ ಗೆಲುವು
ದೈವದಾಟ; ದೇವನಿಚ್ಛೆ;
ವ್ರತವು ಸಾಧ್ಯವಿರಲು ಹರ್ಷಭರಿತನಾಗಿಹೆ. ”

“ ಭುಗಿಲ್ಲನೊಮ್ಮೆ ನಾಡದೆದ್ದು
ಮರಣದೊಡನೆ ಕಟ್ಟಿ ಜಿದ್ದು
ಹಂಗುದೊರೆದು ಕಾದುತಿರಲು ಕ್ರಾಂತಿದರ್ಶನ
ಲಭಿಸಿತೆನುವೆ. ಕ್ರಾಂತಿಪುರುಷ
ಬಂಧನಗಳ ಬಿಸುಟದಿರನೆ ?
ಅವನು ಬಂದು ನೆಲಿಸಲೆನಗೆ ರೋಮಹರ್ಷಣ.

ಇಂತು ನೀನು ನುಡಿದು ನಡೆದೆ;
ಕೃತಿಮಾಲೆಯ ನಾಡಿಗಿತ್ತೆ;
ಬಗೆಯು ನುಡಿಯು ನಡೆಯುಲಿದ್ದ ನಿಲುವ ಯೋಗವು
ಹಿರಿದೆಂಬುದ ತೋರ್ದೆ ಜನಕೆ
ಶ್ರೇಷ್ಠವೆಂದು ಸಾರುತಿಳೆಗೆ,
ಮೊಳಗುತಿರಲು ನಿನ್ನ ಮುಕ್ತಿಯುದಯರಾಗವು.

---

## ೧. ಸನಾತನಿ-ವಿನೂತನಿ

ಮುಗಿಲಾಚೆ ದೇಗುಲದಿ ಗರ್ಭಗುಡಿಯೆದುರು
ನಿಂತೆವೈ ! ಓ ಗೆಳೆಯ ! ನಾವೆದುರುಬದುರು.
ನಾನು ನಾಸ್ತಿಕನೆಂದು ದೂರಿನಿಂದ
ನೀ ಶರಣುತೊಡೆದಿದ್ದೆ ಮೊದಲಿನಿಂದ.
ನಿನ್ನಿಷ್ಟದೈವತದ ದೇಗುಲಕೆ ನಡೆದು
ನಾನು ಬಂದಿರೆ, ಹೋದೆ ದಂಗುವಡೆದು.
ಇಂತೇಕೆ ? ನೀನಿಲ್ಲಿ ? ಹೇಗಿವೇನೆಂತು ?
ಎಂಬ ಮಾತಿನ ಮೋಡಿ ನಿನ್ನಿಂದ ಬಂತು.

ನೀನು ಹೊತ್ತಿಹುದೊಂದೆ— ಮಡಿಯ ದೋತರವು.
ಕೊರಳೊಳಲಲೆದಾಡುತಿದೆ ರುದ್ರಾಕ್ಷಿಸರವು.
ಹಣೆಯಲ್ಲಿ ಭಸ್ಮದಾ ಬೆರಳುಗಳು ಮೂಡಿ
ನೀ ನಿಂತೆ ಗೋಪಾದ ಚಂಡಿಕೆಯ ತೀಡಿ.
ನಿನ್ನ ಮೆಯ್ಯಲ್ಲಿತ್ತು ಯಜ್ಞೋಪವೀತ.
ನಿನ್ನ ಬಾಯಲ್ಲಿತ್ತು ಭಾರತದ ಗೀತ.
ನಿನ್ನ ಕೈಯ್ಯಲ್ಲಿತ್ತು ಪೂಜಾರಿ ಗಂಟೆ.
ಇಲ್ಲವಾವಿವು ನನಗೆ. ಅದಕಂತೆ ತಂಟೆ !

ನಾನಹುದು ಬರಿ ಪೋಲಿ, ಕೇರಿಕೇರಿಯಲಿ
ಕವನಗಳ ಕಟ್ಟುತ್ತ ನಿಂದ ದಾರಿಯಲಿ
ಕೇಳ ಬಯಸುವ ಕರ್ಣಗಳಲವನು ಹೊಗಿಸಿ
ದಾರಿಹೋಕರ ನಿಲ್ಲಿಸುತ್ತಳಸಿ ನಗಿಸಿ

ಹೊಲೆಯ-ಹಾರುವ, ಊಚ-ನೀಚರೆಡೆಗೆ
ಬಡಿಸಿರುವದನ್ನುಂಡು,— ಮತ್ತೆ ಕಡೆಗೆ !
ಮನವೆ ದೇಗುಲ ಮತ್ತೆ ಇಳೆಯೆ ಗುಡಿಯೆಂದೆ.
ಬಾಳನುಳಿದಿನ್ನಾವ ದೇವನಿಲ್ಲೆಂದೆ !

ನಿತ್ಯ ವೈಶ್ವಾನರವು, ನಿತ್ಯ ನೈವೇದ್ಯ
ಅನ್ನಸಂತರ್ಪಣೆಯು : ನಿನಗೆ ವೇದ್ಯ.
ಹಗಲಿರುಳು ಮನೆಯಲಿದೆ ಅಗ್ನಿಹೋತ್ರ.
ಹನ್ನೆರಡು ತಿಂಗಳೂ ವೇದಶಾಸ್ತ್ರ.
ಕೂತರೆಪ್ಪರೆ ಮುಖದಿ ವಾಯುಸ್ತುತಿಯು.
ಹಡೆದಿರಲು ಹಿಂಗಿರಲು ವಾರ-ತಿಥಿಯು.
ಕರ್ಮ, ಗ್ರಹ, ನಕ್ಷತ್ರ, ಸಂಧ್ಯೆ, ಪಂಚಾಂಗ,—
ತುಂಬಿತಿವರಿಂದ ನಿನ್ನುತ್ತಮಾಂಗ.

ಹೋಮಹವನಗಳಿಲ್ಲ ನನಗೆ. ಹೋಮರನು
ಬರೆವ ಕಾವ್ಯವನೋದಿ ನಲಿವ ಪಾಮರನು
ನಾನಹುದು. ನವ ದರ್ಶನಗಳ ಕೋಷ್ಟಕವು
ನಾ ನಿತ್ಯ ಪಠಿಸುತಿಹ ಮಂಗಳಾಷ್ಟಕವು.
ನನಗಿಲ್ಲ ಮನುಸ್ಮೃತಿಯು, ಧರ್ಮಸಿಂಧು.
ನನ್ನ ಸಿಂಧುವದೊಂದೆ,— ಅನುಕೂಲಸಿಂಧು.
ಹಬ್ಬ ಹುಣ್ಣಿಮೆಯಿಲ್ಲ, ಪೂಜೆ, ಮಂತ್ರ.
ನನ್ನುಪಾಧಿಯೆ ಬೇರೆ, ನನ್ನ ಮನ್ವಂತ್ರ !

ಹೀಗಿರಲು ನಾ ದೇಗುಲಕೆ ಬಂದ ಗುಟ್ಟು
ಏನೆಂಬುವಿಯ ? ನುಡಿವೆ ; ಕೇಳು ಮನವಿಟ್ಟು.
ನಾನು ವನಸುಮ. ನೀನು ಉದ್ಯಾನಸುಮವು.
ನಾವು ಬೀರುವ ಕಂಪಿಗೊಂದೆ ಕ್ರಮವು.

ನೀನು ವ್ಯುತ್ಪತ್ತಿಯಿರೆ ನಾನು ಪ್ರಳಯ.
ಕಟ್ಟಲಿಹ ಸ್ಥಿತಿಯೊಂದೆ, ಒಂದೆ ನಿಳಯ.
ನೀ ಗುಡಿಯಲಿಹ ಹಣತೆ. ನಾನು ಕೋಲ್ಮಿಂಚು.
ಬಿತ್ತಿದೊಲು ಬೆಳೆ ನೀನು. ನಾನು ಹೊಸ ಹೊಂಚು.

ಬಯಲ ಮೇಲಿರುವ ಆಲಯದಿ ಅದಕಂತೆ
ಕೂಡಿದೆವು. ದಾರಿಗಳು ಬೇರೆಯಿರೆ ಚಿಂತೆ
ನಮಗೇಕೆ? ನಾವು ಮುಟ್ಟಿದ ಮುಕ್ತಿಯೊಂದೇ.
ಕೊನೆಗಿಲ್ಲಿ ಸಾಧಿಸಿದ ಸಾಮೀಪ್ಯವೊಂದೇ.
ಸಗುಣವನ್ನಾರಾಧಿಸುತ ನೀನು ಬಂದೆ.
ನಿರ್ಗುಣವ ನೆನೆಯುತ್ತ ನಾನಿಲ್ಲಿ ನಿಂದೆ.
ಆಲಯದಲಿಹ ಬಯಲನಿನ್ನು ತೆಗೆದಪ್ಪಿ
ಆಗ[illegible] ಬಾ ನಾವು ಹಿಂಡಿಹಿಪ್ಪಿ.

ಕರ್ಮಶೀಲನು ನುಡಿದ: ನಿಮ್ಮ ಬರವಿಲ್ಲಿ
ಉಚಿತವಿರಬಹುದಿರಲಿ. ಸಲಿಗೆ ತರವೆಲ್ಲಿ?
ಮೂಡಪಡುದೆಸೆಗಳೊಲು ಅಂತರವು ನಡುವೆ
ತೋರೆ ನನಗೇಕೆ ನಿಮ್ಮಂಥವರ ಗೊಡವೆ?
ಭಿನ್ನಮಾರ್ಗಗಳಿರಲು ರೀತಿ ಭಿನ್ನ.
ನನ್ನ ನುಡಿಗಿರದಿರಲಿ ನಿಮ್ಮ ಮನ ಖಿನ್ನ.
ಒಳಗೆ ದೇವನ ಪೂಜಿಸುವೆ ನಿಂತು ಬಳಿಗೆ.
ನೀವು ತಾಳುವದಿಲ್ಲಿ ಒಂದು ಗಳಿಗೆ.

ಹೀಗೆಂದು ಕರ್ಮಶೀಲನು ಮುಂದೆ ನಡೆದ.
ಆದರಾ ಗರ್ಭಗುಡಿ ಬಾಗಿಲದಿ ತಡೆದ.
ಇಕ್ಕಿದಾ ಬಾಗಿಲವು ಇಕ್ಕಿದಂತಿತ್ತು.
ನುಣ್ಣನೊಳದನಿಯೊಂದು ಉಕ್ಕಿದಂತಿತ್ತು:

ಓ ! ಸನಾತನಿ ! ಹೋಗು. ಪಡುವಣದಿ ಹುಟ್ಟು.
ಆಗ ತಿಳಿವುದು ನಿನಗೆ ತಿಳಿವಿನಾ ಗುಟ್ಟು.
ಓ ! ಏನೂತನಿ ! ಮತ್ತೆ ಮೂಡಣಕೆ ತೆರಳು.
ಆಗ ಹೊಳೆವುದು ಕರ್ಮಕಾಂಡದಾ ತಿರುಳು.

---

## ೨. ವಿಜ್ಞಾನಿ

೧

ತಂತ್ರ-ಮಂತ್ರವಿದಲ್ಲ;
ಬರಿಯ ಸೃಷ್ಟಿನಿಯಂತ್ರ.
ಈ ಜಗನ್ನಿಯಮಗಳ ತಿಳಿವೆ ಶಕ್ತಿ.
ಅವುಗಳನು ಪಾಲಿಸುತ
ತಪ್ಪದೆ ಜಗನ್ನಿಯಾ-
ಮಕನಾಗಿ ಬಾಳುವದೆ ನರಗೆ ಮುಕ್ತಿ.

ಅವ್ಯಕ್ತದಿಂದ ಬಂ-
ತಿಲ್ಲಿ ಮೂಲ ದ್ರವ್ಯ-
ವದರಿಂದ ಪಂಚ ಭೂತಗಳ ಸಂಚು;
ಬೆಳಕಿನುಂಡೆಗಳಂತೆ
ಗೋಲಗಳು ಸಿಡಿದವೈ.
ಸಗುಣವಾಗಿತ್ತೆಂದು ನಿಃಸೀಮದಂಚು.

ಗ್ರಹಮಾಲೆಗಳ ಗತಿಯು,
ಗೋಲರಾಶಿಯ ದ್ಯುತಿಯು,
ನಕ್ಷತ್ರಮಂಡಲದ ಹೃದಯಸಂಹುತಿಯು
ನಂಬಿರುವವಾಧಾರ-
ವೆಂದು ನಿಯಮವನೊಂದು.
ಉಲ್ಲಂಘಿಸಿದ ದಿನವೆ ಅವಕೆ ಚ್ಯುತಿಯು.

ನಿರ್ವಯಲಿನೊಂದನಂ-
ತದಿ ನಿರಾಳವ ನಂಬಿ
ಶೂನ್ಯ ಸಿಂಹಾಸನದಿ ರೂಢವಾಗಿಹುದು

ಸೃಷ್ಟಿಯಿದು ತಿಳಿದು ನೋ-
ಡಲು ತಾ ತ್ರಿಶಂಕುವೈ !
ಆದರೀ ನಿರಾಧಾರ ಗೂಢವಾಗಿಹುದು.

ಆಕರ್ಷಣವದೊಂದು
ಆಕರ್ಷಿಸುತ ಕಟ್ಟಿ
ಪರಮಾಣು ಘರ್ಷಣವು ಮುನ್ನೂಕುತಿಹುದು
ಪ್ರಗತಿಯಾ ಹೆದ್ದಾರಿ-
ಯಲ್ಲಿ ನಿರ್ಮಿತವಿದನು;
ಘರ್ಷಣದ ವಿಕಸನವು ಜೀಕುತಿಹುದು.

ಹಿಂದುಮುಂದಕೆ ಮತ್ತೆ
ಜನನ-ಮರಣದ ನಡುವೆ,
ವಿಶ್ವಪದ್ಮದ ಹೃದಯವರಳುತಿರಲು ;
ಕಾಣುವಂಥ ಪ್ರಪಂಚ-
ವಿನ್ನೊಂದಕೆಡೆಗೊಟ್ಟು
ಅವ್ಯಕ್ತವೊಡಲೆಡೆಗೆ ಹೊರಳುತಿರಲು.

ಬರಿ ಧರಿತ್ರಿಯನೊಂದ-
ನೀಕ್ಷಿಸಿರು. ನೆಲ, ಹುಲ್ಲು,
ಪಶು, ಪಕ್ಷಿ, ದಾನವರು, ಮಾನವರು ಬೆಳೆದು
ಶಕ್ತಿಯ ವಿಕಾಸವದು
ಹೆಚ್ಚು ಹೆಚ್ಚಿಗೆ ಕಂಡು
ಧರೆಯಿದು ಘನೀಭೂತವಾಗಿ ಹೊಳೆದು

ಬನಗಳಿಂದಿದು ಸಾಂದ್ರ ;
ಪ್ರಾಣಿವರ್ಗದ ಕೇಂದ್ರ.
ಅಹುದು ಸ್ಥಾವರವಹುದು ಮತ್ತೆ ಜಂಗಮವು ;

ನೂರು ನದಿಗಳ, ನೂರು
ನಿಗಮಾಗಮದ, ನೂರು
ಕುಲ-ಜನಾಂಗಗಳ ಹಿರಿಯುಗಮ, ಸಂಗಮವು.

ಪಂಚಭೂತದ ಹೊಂಚಿ
ಪಂಚೇಂದ್ರಿಯಕೆ ಮೂಲ.
ಕುಸುಮದಾ ಕೋಮಲತೆಯಹುದು ಮನಸು.
ಹೃದಯ,— ಚುಂಬಕದಲ್ಲಿ
ನೆಲಸಿದಂತಃಶಕ್ತಿ.
ಉದಯಾಸ್ತಗಳ ಬಣ್ಣವಹುದು ಸವಿಗನಸು.

ಗರಿಹೂವಿಗಿಹ ಮೊನೆಯ-
ದಹುದು ಮಾನವ ಬುದ್ಧಿ.
ಪರಮಾಣುವಿಂದ ಪರಮಾರ್ಥ ಬಂತು.
ಇಂತಿರಲು ಕಪಿಲ ಕಂ_
ಡಿಹ ಕಣದ ಶೋಧನವೆ
ಮೂಲ ಗುರಿಯೆಂಬುದನು ಮರೆವುದೆಂತು ?

ಭೂಗರ್ಭದಿಂದತ್ತ
ನಿಃಸೀಮ ಪರ್ಯಂತ,
ಬೆಂಕಿಬೆಟ್ಟವ ಹಿಡಿದು ಬಗೆಯ ವರೆಗೆ
ಹೊತ್ತಿದಗ್ನಿಯದೊಂದೆ :
ನಿಯಮಾನುಸಾರಿಣಿಯು.
ಅವಕಾಶವಿಲ್ಲಿಲ್ಲ ಮುಚ್ಚುಮರೆಗೆ.

ನಕ್ಷತ್ರಮಾಲೆಯ-
ಕ್ಷರಗಳಿಂದೊರೆದಿರುವ
ಮುಗಿಲ ಹೊತ್ತಿಗೆಯೋದು. ಮನನ ಮಾಡು.

ಈ ಸ್ವಯಂಸಿದ್ಧ ಕೃತಿ-
ಯಲ್ಲಿ ಮುಂದಿನ ಪುಟವ-
ದಾವುದೆಂಬುದ ನೀನು ತಿಳಿದು ನೋಡು.

ಅಂದಿಗೀ ಸೃಷ್ಟಿ ನಟಿ.
ಸೂತ್ರಧಾರನು ನೀನು.
ರೆಕ್ಕೆಯೆತ್ತಿಹ ಭೂವಿಮಾನವನ್ನು
ಅದರ ಗುರಿಯೆಡೆಗೊಯ್ವ
ವೈಮಾನಿಕನೆ ಆಗಿ
ಪಲ್ಲಟಿಸು ಜನದೃಷ್ಟಿಕೋನವನ್ನು.

೨

ನಮ್ಮನಾಡಿಸುತೇಡಿ-
ಸಿದ್ಧ ನಿರ್ಜರರೆಲ್ಲ
ಬಾಳುವರು ನಮ್ಮ ಕೈಗೊಂಬೆಯಾಗಿ.
ಯಾರು ಬಲ್ಲರು? ನಾಳೆ
ಅಮರಾವತಿಯೆ ಬಂದು
ಕುಣಿಯುವದು ನಮ್ಮೆದುರು ರಂಭೆಯಾಗಿ.

ಸಡಿಲಿತಿಂದ್ರನ ಸಿಡಿಲು;
ಮಿಂಚಾಯ್ತು ಮನೆದೀಪ;
ವಾಯು ಮನೆಮನೆಯ ಬೀಸಣಿಗೆಯಾಗಿ;
ವರುಣ ತೋಟಗನಾಗಿ
ಅಗ್ನಿ ಬಲ್ಲವನಾಗಿ;
ಅಶ್ವಿನಿಯು ಮನೆಮನೆಯ ವೈದ್ಯನಾಗಿ.

ಮೂಲೆಗುಂಪಾಗಿರುವ
ಜಗದ ಸಂಸಾರವನು
ಒಂದುಗೂಡಿಸಿತು ವಿಜ್ಞಾನವಿಂದು;

ಮಾನವ ಕುಲಕೆ ಹೊಸತು
ಕಣ್ಣು ಕಿವಿಗಳನಿತ್ತು
ಹೊಸತು ಮನ-ಬುದ್ಧಿಗಳ ಕಾಣ್ಕೆ ತಂದು.

ವಾಯು ವಾಹನವಾದ.
ಇಂದ್ರ ಸಾರಥಿಯಾದ.
ಗುರು-ಮಂಗಳರ ಗತಿ ಸಮೀಪವಾಯ್ತು.
ಮುಗಿಲಾಯ್ತು ಮನೆಯೆದುರಿ-
ಗಿರುವ ಕ್ರೀಡಾಂಗಣವು.
ಕಡಲು ನೆಲದಾಯ ಮೈದೊಳೆವ ತೊತ್ತಾಯ್ತು.

ಹೋಮ-ಹವನಗಳನ್ನು
ಕೊಂಡೆಮ್ಮ ರಕ್ಷಿಸಿದ
ವ್ಯೋಮಪತಿಗಳು ಬಂದು ಕಾಣ್ಕೆ ತಂದು
ನರಚಕ್ರವರ್ತಿಯಾ-
ಸ್ಥಾನದಲಿ ಕೈಮುಗಿದು
ನಿಂತ ಸಾಮಂತ-ಮಾಂಡಲಿಕರಿಂದು !

ಶರಣು ಬಂದನು ವಿಷ್ಣು ;
ಶರಣೆಂದ ಶಿವರುದ್ರ ;
ಸ್ಥಿತಿ-ಲಯದ ಸೂತ್ರಗಳು ನಮ್ಮವಾಗಿ.
ಇನ್ನುಳಿದಿರುವದೊಂದೆ :
ಸಂಜೀವಿನೀ ವಿದ್ಯೆ :
ನಾಳೆ ನಮ್ಮದು, ಬ್ರಹ್ಮ ಸೋತು ಹೋಗಿ !

೩

ಷಣ್ಮುಖಗೆ ಗುರಿಯಿಟ್ಟು
ದಶಮುಖನ ನಿರ್ಮಿಸಿದ
ಅಪಕೀರ್ತಿ ಸಂದಿಹುದು ನಮ್ಮ ಗಣಕೆ.

ಈ ಸ್ವಯಂಸಿದ್ಧ ಕೃತಿ—
ಯಲ್ಲಿ ಮುಂದಿನ ಪುಟವ-
ದಾವುದೆಂಬುದ ನೀನು ತಿಳಿದು ನೋಡು.

ಅಂದಿಗೀ ಸೃಷ್ಟಿ ನಟಿ.
ಸೂತ್ರಧಾರನು ನೀನು.
ರೆಕ್ಕೆಯೆತ್ತಿಹ ಭೂವಿಮಾನವನ್ನು
ಆದರ ಗುರಿಯೆಡೆಗೊಯ್ವ
ವೈಮಾನಿಕನೆ ಆಗಿ
ಪಲ್ಲಟಿಸು ಜನದೃಷ್ಟಿಕೋನವನ್ನು.

೨

ನಮ್ಮನಾಡಿಸುತ್ತೇಡಿ-
ಸಿದ್ಧ ನಿರ್ಜರರೆಲ್ಲ
ಬಾಳುವರು ನಮ್ಮ ಕೈಗೊಂಬೆಯಾಗಿ.
ಯಾರು ಬಲ್ಲರು? ನಾಳೆ
ಅಮರಾವತಿಯೆ ಬಂದು
ಕುಣಿಯುವದು ನಮ್ಮೆದುರು ರಂಭೆಯಾಗಿ.

ಸಡಿಲಿತಿಂದ್ರನ ಸಿಡಿಲು;
ಮಿಂಚಾಯ್ತು ಮನೆದೀಪ;
ವಾಯು ಮನೆಮನೆಯ ಬೀಸಣಿಗೆಯಾಗಿ;
ವರುಣ ತೋಟಿಗನಾಗಿ
ಅಗ್ನಿ ಬಲ್ಲವನಾಗಿ;
ಅಶ್ವಿನಿಯು ಮನೆಮನೆಯ ವೈದ್ಯನಾಗಿ.

ಮೂಲೆಗುಂಪಾಗಿರುವ
ಜಗದ ಸಂಸಾರವನು
ಒಂದುಗೂಡಿಸಿತು ವಿಜ್ಞಾನವಿಂದು ;

ಮಾನವ ಕುಲಕೆ ಹೊಸತು
ಕಣ್ಣು ಕಿವಿಗಳನಿತ್ತು
ಹೊಸತು ಮನ-ಬುದ್ಧಿಗಳ ಕಾಣ್ಕೆ ತಂದು.

ವಾಯು ವಾಹನವಾದ.
ಇಂದ್ರ ಸಾರಥಿಯಾದ.
ಗುರು-ಮಂಗಳರ ಗತಿ ಸಮೀಪವಾಯ್ತು.
ಮುಗಿಲಾಯ್ತು ಮನೆಯೆದುರಿ-
ಗಿರುವ ಕ್ರೀಡಾಂಗಣವು.
ಕಡಲು ನೆಲವಾಯ ಮೈದೊಳೆವ ತೊತ್ತಾಯ್ತು.

ಹೋಮ-ಹವನಗಳನ್ನು
ಕೊಂಡೆಮ್ಮ ರಕ್ಷಿಸಿದ
ಸ್ತೋಮಪತಿಗಳು ಬಂದು ಕಾಣ್ಕೆ ತಂದು
ನರಚಕ್ರವರ್ತಿಯಾ-
ಸ್ಥಾನದಲಿ ಕೈಮುಗಿದು
ನಿಂತ ಸಾಮಂತ-ಮಾಂಡಲಿಕರಿಂದು !

ಶರಣು ಬಂದನು ವಿಷ್ಣು ;
ಶರಣೆಂದ ಶಿವರುದ್ರ ;
ಸ್ಥಿತಿ-ಲಯದ ಸೂತ್ರಗಳು ನಮ್ಮವಾಗಿ.
ಇನ್ನುಳಿದಿರುವದೊಂದೆ :
ಸಂಜೀವಿನೀ ವಿದ್ಯೆ :
ನಾಳೆ ನಮ್ಮದು ಬ್ರಹ್ಮ ಸೋತು ಹೋಗಿ !

೨

ಷಣ್ಮುಖಗೆ ಗುರಿಯಿಟ್ಟು
ದಶಮುಖನ ನಿರ್ಮಿಸಿದ
ಅಪಕೀರ್ತಿ ಸಂದಿಹುದು ನಮ್ಮ ಗಣಕೆ.

ಭೂಮಿಯಿದು ಕೈಲಾಸ-
ವಿರಲೆಂದು ನಾವ್ ಬಯಸಿ
ಯಮಲೋಕವಾಗಿಸಿದೆವೆನುವರೀ ಕ್ಷಣಕೆ.

ಯಂತ್ರಯುಗದಾಚಾರ್ಯ-
ರಾಗಿ ಸ್ಥಾಪಕರಾಗಿ
ಕುಲನಾಶವನೆ ಗೆಯ್ದೆವೆಂದೊರೆವರು.
ಸುಖದ ಬೀಜವ ಬಿತ್ತಿ
ದುಃಖವನೆ ಬೆಳೆಯುತಿಹ
ದುರ್ವಿಲಾಸವಿದೆಂದು ಜನ ಜರೆವರು.

ಆಕಾಶ-ಭೂಮಿ-ಜಲ-
ಸಂಚಾರಿಯಾಗಿರುವ
ಸಂಹಾರಯಂತ್ರಗಳ ಸಂವರ್ಧಿಸಿ
ಖಂಡಖಂಡಗಳನ್ನೆ
ತುಂಡರಿಪೆವೆನ್ನುವರು
ಯಮಧರ್ಮನೊಡನೆ ದಿನವೂ ಸ್ಪರ್ಧಿಸಿ.

ವಿಜ್ಞಾನಿ ಜ್ಞಾನೋದ-
ಧಿಯನು ಮಂಥಿಸುತಿಹನು.
ಬಂದ ರತ್ನಗಳು ಬಲವಿದ್ದವರಿಗೆ.
ಅಪಹರಿಸಲೆಲ್ಲವನು
ರಾಕ್ಷಸಗಣವು ತಾನು—
ಇದರ ಪಾಪದ ಹೊರೆಯ ಹೊಣೆ ಯಾರಿಗೆ?

ಮಂಥನದಿ ಜನಿಸಿದವು
ವಿಷವಾಯು, ವಿದ್ಯುತ್ತು,
ಯಕ್ಷಕಿರಣಗಳು, ಆಕಾಶವಾಣಿ.

ವಿಷವ ನುಂಗುವ ನೀಲ-
ಕಂಠನಿಲ್ಲದೆ ಭೂಮಿ-
ತಾಯಿಯಾಗಿಹಳಿಂದು ಪ್ರಳಯರಾಣಿ !

ನಮ್ಮ ಮಂಥನದಿಂದ
ಜನಿಸಿರುವ ವಿಷವನ್ನೆ
ಜನಕಿತ್ತು ಅಮೃತವನ್ನುಂಡು ತೇಗಿ
ಲಕ್ಷ್ಮಿ - ಕೌಸ್ತುಭ – ಚಂದ್ರ–
ರನು ಹಂಚಿಕೊಳುತೆಲ್ಲ
ಬೆಳೆವರಲ್ಪರು ಸಾರ್ವಭೌಮರಾಗಿ.

ಕೆನ್ನೀರ ಹೋಳಿಯಾ –
ಡುತ್ತ ಕಂಗೆಡಿಸುತಿಹ
ಅಸುರರನು ಸುರಗಣವು ಎದುರಿಸಿಲ್ಲ.
ಆಳಾಗಿ ಮಡಿಯುತಿಹ
ನಮ್ಮ ಬಂಧನ ಬಿಡಿಸಿ
ಚಾಣಕ್ಯತಂತ್ರಗಳ ಚಮರಿಸಿಲ್ಲ.

ವಿಶ್ವಮೋಹಿನಿಯಾಗಿ
ಭಸ್ಮಾಸುರನ ಬಳಿಗೆ
ಹೋಗಿ ವಿಷ್ಣುವು ತಾನು ನರ್ತಿಸಿಲ್ಲ.
ತನ್ನ ತಲೆಯನು ತಾನೆ
ಕಳೆದುಕೊಳುವಂತಸುರ, —
ಅವನ ಕಣ್ಣೆದುರಿನಲಿ ಮೂರ್ತಿಸಿಲ್ಲ,

ವಿಜ್ಞಾನ — ಸಾಧನವು ;
ಶಕ್ತಿಸಂಚಯವಹುದು.
ಅದನಪವ್ಯಯಗೊಳಿಸೆ ರಾಜಕಾರಣಿಯು

ಲಕ್ಷ್ಮಿಯನು ಕಾಲ್ಮುರಿದು
ಸೆರೆಯಿಟ್ಟ ಧನಿಕನೊಲು, —
ಹೊಸ ಜಗಕದೆಲ್ಲಿ ಸಾರಣೆಯು-ಕಾರಣೆಯು?

ಏಕಚಕ್ರಾಧಿಪತಿ
ಕೌರವಾಗ್ರಣಿಯಿರಲು,
ಭೀಷ್ಮ-ದ್ರೋಣರು ಕೇಳು ಜಗಕೆ ಮುಳುವು.
ಇನ್ನಾದರೂ ನೋಡು:
ಆಸೆ ಫಲಿಸುವದೇನೊ!
ಕಾಣುವದೆ ಧರ್ಮ-ಯಾದವರ ಸುಳುವು?

ಅಜ್ಞಾನ, — ವಿಜ್ಞಾನ-
ವನ್ನು ತನ್ನಂಕಿತಮೊ-
ಳಿರಿಸೆ, ತಾಮಸಕಾಗ ವಿಜಯವಿರದೆ?
ಈ ಮಹಾ ದಾಸ್ಯದಿಂ-
ದೆಮಗೆ ಬಿಡುಗಡೆಯೆಲ್ಲಿ,
ಜ್ಞಾನೋದಯದ ಅರುಣಕಾಲ ಬರದೆ?

ಜ್ಞಾನವಿಲ್ಲದಲೆ ವಿ-
ಜ್ಞಾನ ಬೆಂತರ-ಭೂತ.
ಹೃದಯವಿಲ್ಲದ ಬುದ್ಧಿ ಬರಿಯ ಹೊಯಲು.
ಅದರಂತೆ ವಿಜ್ಞಾನ-
ವಿಲ್ಲದಿಹ ಧಾರುಣಿಯು
ಅಜ್ಞಾನ ಹಬ್ಬುತಿರುವಂಥ ಬಯಲು!

೮

ಮುಂದೊಮ್ಮೆ – ಸರಸತಿಯು
ವೀಣೆಯನು ಮಿಡಿವಂದು,
ಕೃಷ್ಣನ ಸುದರ್ಶನವು ಮರಳಿ ಹೊಳೆವಂದು,

ಕಲ್ಯಾಣವನು ಪಟ್ಟ-
ಗಟ್ಟಿ ಜನ ನಿಲುವಂದು,
ಭೂಮಿತಾಯಿಯ ತಮವ ಕಳೆಯುವಂದು,

ಜನತೆಯಾರಾಧಕರು
ರಾಜ್ಯಸೂತ್ರವ ವಹಿಸಿ
ಜನಶಂಕರಿಯ ಪೂಜೆಗೆಯ್ಯುವಂದು,
ವ್ಯಕ್ತಿತ್ವವೇ ಸಮ-
ಷ್ಟಿಯ ಹಿರಿಯ ಗುರಿಯೆಂದು
ಜೀವನವನು ಶಿಖರಕ್ಕೆ ಒಯ್ಯುವಂದು,

ವಿಜ್ಞಾನ ಮೆರೆಯುವವು
ಜ್ಞಾನನವವಿಗಲ್ಲಾಗಿ;
ಸಂಸ್ಕೃತಿಯ ಮಂದಿರದ ದ್ವಾರವಾಗಿ;
ನೆಲದಣುಗರಂಬೆಗಾ-
ಲಿಡುವ ಪ್ರಾಂಗಣವಾಗಿ,
ಹಿಗ್ಗಿ ತುಂಬುತಿಹ ಪ್ರಾಕಾರವಾಗಿ.

ಇಳೆಯ ಮೂಲೆಗಳೆಲ್ಲ
ಸ್ವರ್ಣನಗರದ ಕೇರಿ-
ಯಾಗುತಪ್ಪು ತವೆಲ್ಲ ಮನೆಯ ಮಾಡಾಗಿ,
ದಿವ್ಯ ಪಂಚೇಂದ್ರಿಯಗ-
ಳಿಂದ ನರ ಭವ್ಯನಿರೆ
ಅನ್ನ ನಿದ್ರೆಯು ನಿರಾಯಾಸವಾಗಿ,

ದೇಹ ಕೇಳುವ ತಣಿವು
ಗೇಹ ಗೇಹದಿ ದೊರೆತು
ನೇಹ-ನಲುಮೆಯೆ ದಿನದ ನೀತಿಯಾಗಿ,

ಮನವನುನ್ಮನವಾಗಿ-
ಸುವದೊಂದೆ ಗುರಿಯಾಗಿ,
ವಿಶ್ವಯಾತ್ರೆಯೆ ಕಣ್ಣುಪ್ರೀತಿಯಾಗಿ

ಜನವಿರಲು, ಪ್ರಾರಂಭ
ನಾಗರಿಕತೆಯ ಯುಗಕೆ.
ಅದೆ ಪ್ರವಾದಿಯು ಕಂಡ ಪುಣ್ಯಪುರವು.
ಇದಿ ವಸುಧಿಯಾಗುವದು
ಆ ಕನಸಿಸಿಂದ್ರಪುರಿ.
ಇಂದಿಲ್ಲ ನಾಳೆಯಹುದದರ ಬರವು.

ಅಲ್ಲ ಸೊಬಗಿದು ಸ್ವಪ್ನ;
ಸತ್ಯಸೃಷ್ಟಿಯಿದಹುದು
ಸುಭಗ-ಸುಂದರವಿರಲು ಜಗವು ನಾಳೆ.
ಪ್ರಕೃತಿ ಮಲಿನವದೀಗ
ಬರಿ ವಿಕೃತಿಯಾಗಿರುತ:
ಇಹುದು ಸಂಸ್ಕೃತಿಯಾಗಿ ಬರಲು ವೇಳೆ.

---

## ೧. ಕನಸಿಗ

( ಒಂದು ನವಪದಿ )

ಈ ಶರಚ್ಚಂದ್ರಿಕೆಯಲಿಂತು ಧೇನಿಸುತಿರುವ
ಶಾಂತ ವೃಕ್ಷಗಳಡಿಯ ನೆಳಲಲ್ಲಿ ಎಳೆ ಹುಲ್ಲು-
ಹಾಸಿಗೆಯ ಮೇಲೊರಗಿ ತಿರುಗಿಸುತ ಮುಗಿಲೆಡೆಗೆ ಅರೆಬಿರಿದ ಕಂಗಳನ್ನು,
ಮೆಲ್ಲನೀಜುತ್ತ ಮುನ್ನಡೆದ ಬಿಳಿ ಕಿರಿ ಮುಗಿಲಿ-
ನೋಳಿಯಂದದಿ ತೇಲ್ವ ವರುಷಗಳನೆಣಿಸುತ್ತ
ನಿರ್ದಿಗಂತಕೆ ನೀಡಿ ನೋಟವ, ಅನಂತತೆಗೆ ಎದೆ-ಮನಸ, ಪ್ರಾಣಗಳನ್ನು,
ಸಸ್ಮಿತ ಸಮಾಧಿಯಲಿ ನಲಿವ ಕಾಲವು ಬರಲು
ನೀನು ವಿಸ್ಮಿತನಾಗದಿರು, ಗೆಳೆಯ! ಕನಸಿಗರ
ಜೀವಿತವು ಬೆಳಕಿನಂತಃಸ್ತಂಭವನು ಸುತ್ತುವದು ರತ್ನಲತೆಯ ತೆರದಿ.

ಬೆಳಗು ಜಾವದಿ ಪ್ರಕೃತಿದೇವಿ ಮರೆ ಮಾಜುತ್ತ
ತಳಿರ್ಗೆಂಪಿಗೆಂದು ತೊಡಿಸಿದ ಮಂಜುರನ್ನಗಳು,
ಹೊಳೆಹೊಳೆವ ಕೆನ್ನೆಗಳು, ಕಣ್ದೆರೆವ ಒಂದೆ ಹೂ, ರಾಗಾನುರಕ್ತ ಮನವು,
ಎಂದೊ, ಎಲ್ಲಿಯೊ, ಎಂತೊ ತುಂಬಿ ಸೂಸಿದ ಗಾನ,
ಯಾವ ಮಾತಿಗೊ ಏನೊ ಅಲುಗಿದಂತಃಕರಣ,
ಹಿಂದೊಮ್ಮೆ ಎಳೆತನದಿ ತಪತಪನೆ ಪ್ರಾಣವನು ತೋಯಿಸಿದ ಸ್ನೇಹಗಂಗೆ,
ದಿವ್ಯಾಮರೋದ್ದೀಪನದ ನೂತ್ನ ರತ್ನಗಳು ;
ಬಾಲ ಮುರಲೀಧರನ ನವಿಲ್ಗರಿಯ ತಲೆಮುಡಿಗೆ-
ಯಿಂದುಗುವ ಕಾಂತಿಗಳು! ನೀನಿವನು ಮರೆಯದಿರು. ಮಧುರ
ಮನಗಾಹಿಯಾಗು!

ಇಂದು ಕಂಡಿಹ ಕನಸೆ ಅಹುದು ನಾಳಿನ ನನಸು.
ವ್ಯಕ್ತಿಯಾ ಸವಿನೆನಸೆ ಜನಜೀವನದ ಸೊಗಸು.
ಇಂದು ನಾವ್ ಹೂಡಿರುವ ಹೂ ಬೆಳಕಿನಾಟವೇ ಕಾಯ್ವ ನಕ್ಷತ್ರ ನಾಳೆ!

ದೇವ ತಾನಾಗಿರೆ ಸದ್ಯೈವ ಸ್ವಪ್ನಸುಮಧುರ,
ಇಡಿ ವಿಶ್ವವ್ಯಾಪ್ತಿಗೇ ಇರಲು ಮೂಲಾಧಾರ-
ವೆಂದು ದೈವಿಕ ಕನಸುಗಾರಿಕೆಯು ಕುಸುಮಿಸುತ ವಿಧವಿಧದ ಪಾಂಗಿನಲ್ಲಿ,—
ಜಡಜೀವನವನೆಲ್ಲವಾಗಿಸುತ ಹೂಗನಸು,
ಹಗುರಾಗಿಸುತ ಮುಗಿಲೊಳಲೆವ ಮೋಡಗಳಂತೆ, -
ಚಿನ್ಮಯಾಕಾಶದಲಿ ತೇಲುಬಿಡುವದೆ ಬಾಳ ಹಿರಿಯ ಹವಣಿಕೆಯು ಹದವು.

---

## ೨. ಧಾರ್ಮಿಕ ಕಲೋಪಾಸಕ

೧

ಬಾಳತೋಟದಲ್ಲಿ ನೀನು
ಬಣ್ಣವಡೆದು ಚಿಟ್ಟೆಯಾಗಿ
ಹೂವಿನಿಂದ ಹೂವಿಗೆರಗುತಾಸ್ವಾದಿಸಿ
ಹೂಜೇನನ್ನು, ಹೂಹುಡಿಯದು
ನಿನ್ನಡಿಯನು ಕುಂಕುಮಿಸಲ-
ದೊಂದಜೇಯ ಹರುಷದಿಂದ ನಿಂತೆ ಮೋದಿಸಿ.

ನಿನ್ನ ಮನವು ಚಿಟ್ಟೆಯಂತೆ.
ಬುದ್ಧಿಗಿರುವದೊಂದು ತೊಡಕು.
ಚೆಲುವನುಳಿದು ಬೇರೆ ಸ್ವರವನೆತ್ತುತಿರುವದು.
ಸ್ವಾತಂತ್ರ್ಯದ ಲಹರಿಗಳನು
ಬಿಟ್ಟು ದೂರ ನಿಂತ ಧ್ರುವದ
ಬೇರೆ ಬೆಳಕ ಪಡೆಯಲೆಂದು ಸುತ್ತುತಿರುವದು.

ಹುಟ್ಟಿನಿಂದ ನಿರಾಯಾಸ-
ವಾಗಿ ಬಂದ ಚಿದ್ವಿಲಾಸ
ಮೇರೆವರಿವುದೆಂಬ ಶಂಕೆ ನಿನ್ನ ಪ್ರೇರಿಸಿ
ತಂದಿತಯ್ಯ ನಿನ್ನ ಚೆಲುವಿ-
ನಾರಾಧನೆಯಲ್ಲದೊಂದು
ನೇಮ, ನಿಷ್ಠೆ, ನೀತಿಮಾರ್ಗವನ್ನು ಸೇರಿಸಿ.

ಚೆಲುವು ಕೊಟ್ಟ ಕಂಗಳಿಂದ
ಧರೆಯ ನೋಡಲೆಲ್ಲ ಪಾಪ
ತೋರ್ಪುದೆಂಬ ನಂಬಿಕೆಯದು ತುಂಬದಾಯಿತೆ ?

ಚೆಲುವಿಗಿಂತ ಪಾವನತರ-
ವಾವುದಿಲ್ಲವಿಳೆಯೊಳೆಂಬ
ನುಡಿಯ ಜೊತೆಗೆ ಬೇರೆ ಮಾತಿಗಿಂಬದಾಯಿತೆ ?

ರಸದೃಷ್ಟಿಯು ನಿನ್ನ ಮನದಿ
ನೀತಿಯಿತ್ತ ಋತಾನೃತದ
ದೃಷ್ಟಿಯೊಡನೆ ಹೊಂದಿಕೊಳದೆ ತಾಕಲಾಡಿತು.
ಎರಡು ಕಿರಣ ಬಂದು ಕುಣಿಯ-
ಲದರ ಮಿಶ್ರಬೆಳಕಿನಲ್ಲಿ
ನಿನ್ನ ನುಡಿಯ ಪಟದ ಮೇಲೆ ಚಿತ್ರ ಮೂಡಿತು.

ಆದಮನಾ ನಂದನಚ್ಯುತಿ-
ಯನ್ನು ಬಣ್ಣಿಸಿರುವ ಮಹಾ
ಕವಿಯ ದ್ವಿಧಾವೃತ್ತಿ ನಿನ್ನ ಮನದಿ ಬಂದಿತು.
ತಾನೆ ಹೊಗರುತಿಹ ಚಿಂತನ-
ದೊಡನೆ ನಿಂತ ನೀತಿಯೊಲವು
ಹೊನ್ನಿಗರಗು ಕೊಡುವ ಮೆರುಗನೊಡನೆ ತಂದಿತು.

ಮೃದು, ಕೋಮಲ, ಸೂಕ್ಷ್ಮವಾದ
ಚೆಲುವದಂತರಂಗವನ್ನೆ
ಬೆಳಗಿ ನಿನ್ನ ಕಾವ್ಯದಲ್ಲಿ ಶೋಭೆಯಾಡಿತು.
ಬೇರೆ ನಿಷ್ಠೆಗಾಗಿ ಜಿನುಗು-
ತಿರುವ ನಿನ್ನ ಬುದ್ಧಿಯೊಲವಿ-
ನಿಂದ ಬೆಳೆದ ಚಿತ್ತಕ್ಷೋಭೆಯದನು ಕೂಡಿತು.

ಧರ್ಮನಿಷ್ಠೆಗಾಗಿ ನೀನು
ಪಟ್ಟ ದುಃಖ ಪರಂಪರೆಯು
ನಿನ್ನ ಕೃತಿಯಲೊಡಮೂಡಿಸಲೆಂತು ಕೃತಕವು ?

ನೋವು ಬೇಕು. ಬೇಕು ಜೊತೆಗೆ
ಹಿಗ್ಗನೊರೆವ ಕಲೆಯು ನೆಲೆಯು.
ಹಿಗ್ಗಿನಾಸರೆರದ ದುಃಖ ಮಾತ್ರ ಹತಕವು.

೨

ನೀನು ಚಿಗರೆ ಸಾರಂಗ-
ದಂತೆ ಕೋಮಲಾಂತರಂಗ.
ಪಾಪಭೀರುವಾಗುತಿಲ್ಲಿ ಬೆಳೆದು ನಿಂದಿಹೆ.
ಕಣ್ವಶಕುಂತಲೆಯರೊಲಿದು
ಸಾಕಿ ಸಲುಹಿದೆರಳೆಯಂತೆ
ವನವಿಹಾರಕೆಂದು ಭೂಮಿಗಿಳಿದು ಬಂದಿಹೆ.

ಹಾಲಿನಂತೆ ಬೆಳ್ಳಗೆಲ್ಲ ;
ಚೆಲುವಿನಂತಿದೆಲ್ಲ ಹಸನ-
ವೆಂದು ಮುಗ್ಧಮನೋಹರನು ನೀನು ಸಾಗಿರೆ,
ನಿಯತಿಯೆಂಬ ವ್ಯಾಧ ತನ್ನ
ಕೂರ್ಗಣೆಗಳನೆಸೆದನೊಡನೆ !
—ಒಂದು, ಎರಡು, ಮೂರು ಬಂದು ನಿನಗೆ ತಾಗಿರೆ.

ಬಾಳ ವ್ರಣಕೆ ಪರಮೌಷಧಿ
ಬಾಳ ಬೇರ ಕಾಣ್ಕೆ ಕಂಡು,
ಇಲ್ಲ, ದೇವದತ್ತ ಕರುಣೆ. ದೊರಕಲೆಂದಿವು
ಹಗಲಿರುಳೂ ಕಾಯುತಿರುವೆ
ಧ್ಯಾನದಲ್ಲಿ, ಚಿಂತೆಯಲ್ಲಿ ;
ಒಂದು ದಿವಸ ತೊರೆಯುಬಹುದು ತಾವೆ ಬಂದಿವು.

ನೀನು ಕಂಡ ಚೆಲುವಿಗೊದಗಿ
ಬಂತು ರಕ್ತದಾವರಣವು,
ಬಾಣವೆಂದು ವ್ಯಾ-ಮನೆಗಳ ಗಾಸಿಗೊಳಿಸಲು ;

ಅಂದೆ ವಿಧಿಯು ನಿನ್ನ ಹಿಗ್ಗಿ-
ನಾಟವನ್ನು ಮುಗ್ಗಿಸುತ್ತ
ನಂಜೇರಿದ ನೀಲಗೊರಲನೊಂದನುಳಿಸಲು.

ಅಂದಿನಿಂದ ಇಳೆಯು, ನಿನ್ನ
ದುಃಖ ರೌದ್ರಗಳನು ಮನದ
ತೊಟ್ಟಿಲಲ್ಲಿ, ಸತ್ತ ಮಗುವ ತೂಗುವಂತೆಯೆ,
ತೂಗುತಿದ್ದೆ, ಹಾಡುತಿದ್ದೆ
ಎದೆ ಬಿರಿಯುವ ಹಾಡುಗಳನೆ
ಉಸಿರಿಗೊಮ್ಮೆ ಪ್ರಾಣ ಹಾರಿ ಹೋಗುವಂತೆಯೆ.

೩

ಅಳುವದೆನಿತು ದಿನವುಳಿವುದು ?
ಹೆಳವನಿಗೂ ಕಾಲು ಬಂದು
ಕುರುಡನು ಕಣ್ಬೆಳಕ ಕಂಡು ಹಿಗ್ಗುತಿರುವನು
ದೇವ ಕರುಣಿಸಿರಲು. ಅವನ
ಕರುಣೆಯಿರದ ಮಾತುಗೂಳಿ
ಜಿಹ್ವೆಯಿದ್ದು ಇಲ್ಲದಂತೆ ಉಗ್ಗುತಿರುವನು.

ನಿನ್ನೊಳೊಂದು ಶ್ರದ್ಧೆ ಜನಿಸಿ
ನವೋತ್ಸಾಹವೊಂದು ಗುಣಿಸಿ
ದೈವ ಕಾಣಿಸಿದ್ದ ತೀವ್ರ ಗಾಯ ಮಾದಿದೆ.
ಹೊಸತು ಬಾಳು; ಹೊಸತು ಗಾನ;
ಚೆಲುವಿನ ನಾಲ್ಕೊಗದ ಧ್ಯಾನ:
ಇದರ ನಾಂದಿಯೊಸಗೆಗೆಂದು ದಾರಿ ಕಾದಿದೆ.

ಗರಿಹೂವಿನ ಮೊತ್ತದೆಡೆಗೆ
ಹಾವಿನ ಹುತ್ತಿರುವದರಿತು,
ರಸವಂತಿಕೆಯಿರದ ನೀತಿ ನೇಮವಂತಿಕೆ-

ಯೆಂದು ತಿಳಿದು, ಬುವಿಯ ತಿರುಳಿ-
ಯಾದ ತತ್ತ್ವದೈವತಗಳ
ಬೆರೆಯೆ, ಹವಣಿಸಿಹುದು ನಿನ್ನ ಬುದ್ಧಿವಂತಿಕೆ.

ನೀನು ತೂಗುತಿರುವ ರುದ್ರ-
ಭಯಾನಕವು ಮಾಯವಾಗಿ
ಹಿಗ್ಗಿನಾ ಸನತ್ಕುಮಾರನಾಡುತೊರಗಿರೆ
ಹೃತ್ತಲ್ಪದಿ, ಶೋಕಗೀತ
ಮಂಗಳಪ್ರದ ಗೀತವೆಂದು ;
ಜೋಗುಳವನು ಕೇಳ್ದ ಕಿವಿಯ ಕಿವುಡು ಹರಿದಿರೆ.

ವೇದ ಗೀತೆಯಂದ ಚೆಂದ,
ಉಪನಿಷತ್ತಿನಾನಂದ
ಬಂದು ನಿನ್ನ ಬಾಗಿಲಲ್ಲಿ ತೂಗಿ ತೊನೆಯಲಿ.
ಯಾವ ಸಿದ್ಧಿಗಾಗಿ ನೀನು
ಶಾಪಗ್ರಸ್ತನಂತೆ ತಪಿಸು-
ತಿದ್ದೆಯಂಥ ನಿಧಿಯು ಮನೆಯ ತುಂಬಿ ಕೊನೆಯಲಿ.

ಚೆಲುವು ಗೆಯ್ಮೆಗಳ ನಡುವಿನ
ಭೇದಭಾವವಳಿದು ಹೋಗಿ
ಕೃತಿ ಸುಂದರ ಚಿತ್ ಸುಂದರ ಹೃತ್ ಸುಂದರವಾಗಿದೆ.
ತ್ರಿಮುಖವಾದ ಚೆಲುವು ಬಂದು
ಬಾಳ ರುದ್ರತೆಗಳನಳಿಸಿ
ಸ್ವಾನಂದದ ಸೆಲೆಯನಿತ್ತು ಕ್ಷೇಮವೆಂದು ಸಾಗಿದೆ.

ದುಃಖ ತೋಡಿದಂಥ ತಗ್ಗಿ-
ನಲ್ಲಿ ಹಿಗ್ಗಿನೊಂದು ಸೆಲೆಯು
ಚಿಮ್ಮಿ ಹೊಮ್ಮಿ ಸರಿತವಾಗುತಾಳವಾಗಿ ಹರಿದಿದೆ.

ಅದರ ದಂಟಿಗೆಲ್ಲ ಹಸಿರು-
ಹುಲ್ಲು ಹಾಸಿದಂತೆ ಬೆಳೆಯು-
ತಲ್ಲಲ್ಲಿಗೆ ಹೂವಿನಂದ ಚಂದ ತುಂಬಿ ಸುರಿದಿದೆ.

ಅಂತರಾಳವಿಂತು ತುಂಬಿ
ತುಳುಕುತಿರಲು ನಿನ್ನ ಜೀವ-
ವೀಜುತಿರಲಿ ತಾ ಮರಾಳದಂತೆ ಮಣಿಯುತ;
ದುಃಖವಿತ್ತ ಜಗವೆ ಸುಖವ-
ನೀವುದೆಂಬ ಶ್ರದ್ಧೆ ಜನಿಸಿ
ದ್ವಂದ್ವಗಳಾಚೆಗಿನ ಬೆಳಕ ಕಂಡು ತಣಿಯುತ.

---

## ೩. ಕಲೋಪಾಸಕನಾದ ಸುಧಾರಕ

೧

ಆಚಾರ್ಯರ ಕುಲದಿ ಜನಿಸಿ
ಲೋಕಾಯತನೆಂಬ ಕೀರ್ತಿ-
ಯನ್ನು ಪಡೆದೆ ಕುಲಧರ್ಮವ ಕಡಲೊಳೆಸೆಯುತ;
ಶ್ವೇತ ದ್ವೀಪದಿಂದ ಮರಳಿ
ಶಸ್ತ್ರಕ್ರಿಯೆಯ ಬೇಕು ಕೊಳೆತ
ನಾಡಪಾಡಿಗೆಂದು ಹಿಡಿದ ಬಾಳ ಮಸೆಯುತ.

ಬಡತನದಲಿ ನಾಡೆ ತೊಳಲಿ
ತಿನ್ನಲು ಕೂಳಿಲ್ಲದೆ ಜನ
ಧರ್ಮಾಂಧರ ಸರಣಿಯನ್ನು ನಿತ್ಯ ತೀಡಲು,
ಕೊಳೆನೀರಿನ ನಾತವಿಡಗಿ
ನಾಡ ಕಳೆಯು ಕಳೆಯುತಿರಲು
ಕರ್ನಾಡಿನ ಕುವರ! ಬಂದೆ ತಿಳಿವ ನೀಡಲು.

ದಿನದ ಬಾಳಿನಪಹಾಸ್ಯವ
ಕಂಡು ನೀನು ರೋಷಗೊಂಡೆ.
ಸುಖವ ಬಿಸುಟುತರ್ಕರಹಿತ ಕರ್ಮಜಾಲದಿ
ತೊಳಲಾಡುವ ಜನತೆಯನ್ನು
ಕಂಡು ಕ್ಲೇಶಗೊಂಡೆ: ಬಾಳ್ವ-
ರೇನು ಪಶುವಿನಂತೆ ಬುದ್ಧಿಯುದಯಕಾಲದಿ?

ಜೇಡಹುಳಗಳುಚ್ಚಾಟನೆ
ಮಿತಿಮೀರಿತು ನಾಡಿನ ಪಡು-
ಮನೆಯೊಳೆಲ್ಲ; ಬಲೆಗಳನ್ನು ತೊಡೆದು ಬಾಗಿ.

ಮಧುಪದಂತೆ ದಿಕ್ಕುದಿಕ್ಕ-
ಗಲೆದು ಜೇನುಗೂಡಿಸುತ್ತ
ನಾಡೆ ನಿಮ್ಮ ಹುಟ್ಟುಗಲು ಹಿಗ್ಗುತಾಳಿರಿ.

ಸುಖವಿರದಾ ಬದುಕು ಬದುಕೆ ?
ಗೂಗೆಯೊಳಬೇಕೆ ಗೃಹದಿ ?
ಕಾಗೆ-ಬೆಕ್ಕು-ಹಲ್ಲಿಗಳಾ ಶಕುನದೊಂದಿಗೆ
ಶಕುಲಾತಿಯ ಹೊದ್ದು ನಿಂತ
ಧರ್ಮಾಂಧರು ಮೈಗರೆಯಲಿ;
ದೊರೆವುದೆಂದೆ ಸುಖವು ಸುಲಭವಿರಲು ಮಂದಿಗೆ.

ಧರ್ಮದ ಹೆಸರಿನಲಿ ಮಾಯು-
ವಾಯ್ತು ನಮ್ಮ ಹಿರಿಮೆಯೆಲ್ಲ.
ಉರುಳುತಿರುವ ಕಾಲಚಕ್ರವನ್ನು ಕಾಣದೆ
ನಿಂತಲ್ಲಿಯೆ ನಿಂತು ನಾವು
ನಗೆಗೇಡಿಗಳಾದೆವೆಂದೆ
ಮನ್ವಂತರವನ್ನು ಮರೆತು ಗತಿಯ ಕಾಣದೆ.

ದೇಶಗತ್ತಿ-ಸಾಮ್ರಾಜ್ಯಗ-
ಳರ್ಥಶಾಸ್ತ್ರದಸ್ತ್ರವಾರ-
ವನ್ನು ನಂಬಿ ನಿಂತ ಧರ್ಮವನು ಗುಲಾಮರು—
ಪಾರತಂತ್ರ್ಯದಲ್ಲಿ ಕೊಳೆವ
ಭಾರತೀಯರಾವು-ಪಾಲಿ-
ಸುತ್ತ ಹೊಳೆವುವೆಂತಾಗುತ ಕುಲಲಲಾಮರು ?

ವಿಜ್ಞಾನದ ಯುಗಾಂತರದೊ-
ಳುಗಿಮಿಂಚಿನ ಮನ್ವಂತರ-
ದಲ್ಲಿ ನಾವು ಕ್ರೀಡಾಯುಗದಾಟ ಹೂಡಲು

ಬಾಳ್ಕೆಯಿಹುದು ಬಯಲಾಟವು;
ಬದುಕು ಬರಿಯ ಬಿಸಿಲುಗುದುರೆ,
ಕೋಡಿವರಿವ ಕಣ್ಣೀರಿವು ಕಡಲ ಕೂಡಲು.

ಮೂಲ ಜ್ಞಾನಿಗಳಿಗೆ ಮೂಲ-
ಗುರಿಯದೆಂದಿಗೊಂದೆ ಇರಲಿ;
ಅವರ ಪಾಪ-ಪುಣ್ಯ ಋತಾನೃತಗಳವರಿಗೆ.
ನಾಡಿನ ಕುಲಧರ್ಮಕರ್ಮ
ನಾಡಿನರ್ಥದಂತೆ ಬೇರೆ-
ಯಾಗದಿರಲನರ್ಥವೆಲ್ಲ, ಕೇರಿಕೇರಿಗೆ.

ಅಲ್ಲಾಡಿಸುತಿರುವಿಯದಕೆ
ಪೆರ್ಮೆವೆತ್ತ ಧರ್ಮವೆಂಬ
ಮರವ ನೀನು ಬೇರು ಹಿಡಿದು, ಜನತೆಯಂಜಲು;
ಜನತೆ ನಂಬಿದಾ ಪುರಾಣ-
ಪುಣ್ಯಕಥೆಗಳನ್ನು ನೀನು
ತಿರುವುಮುದುವುಗೊಳಿಸುತರಳೆಯಂತೆ ಹಿಂಜಲು.

ಧರ್ಮವಿಂದ್ರಜಾಲವೆಂದೆ;
ಕೃಷ್ಣ ಧೂರ್ತಕರ್ಮಿಯೆಂದೆ;—
ಇಲ್ಲ, ನಿನ್ನ ದಾರಿ ಹಿಡಿದ ಲೋಕಾಯತನೆಂದಿಹೆ.
ನಿರ್ವಂಚಿತ ಮೀಮಾಂಸೆಯ
ಸಿದ್ಧಾಂತವು; ಸುಖವೆ ಸಿದ್ಧಿ;
ಎಲ್ಲದಕೂ ಯಥಾರ್ಥತೆಯ ಜ್ಞಾನ ಮೊದಲಿಗೆಂದಿಹೆ.

ಬೇರೆ ದೇಶಗಳು ನವೀನ
ಜಗ-ಯುಗಗಳ ನಿಯಮವರಿತು
ನವ ಸಂಸ್ಕೃತಿಗೆಂದು ಕೋಟೆಗಳನು ಕಟ್ಟಿ ಸಾಗಿರೆ

ಗತ ಧರ್ಮಕೆ ಜೋತು ಬೀಳು-
ತಾತ್ಮಹತ್ಯಕಣಿಗೊಳುವರೆ
ಭಾರತೀಯರವರ ಜ್ಞಾನ ಬೆಂತರದೊಲು ತೂಗಿರೆ?

ಅಂತೆ ನೀನು ಸಂಹಾರಕ-
ನಾಗಿ ಧರ್ಮವಿಲ್ಲವೆಂದೆ;
ಕೊಳ್ಳಿಯಿಟ್ಟೆ ಶಾಸ್ತ್ರಗಳಿಗೆ; ಬೆಂಕಿ ಹಚ್ಚಿದೆ
ರೂಢಿಗಳಿಗೆ; ಕ್ರುದ್ಧನಾಗಿ
ಭೂತ ಮಹಾಭೂತವೆಂದೆ;
ಮುಂದಿಹುದನು ತಿಳಿಯಿರೆಂದು ತುಟಿಯ ಕಚ್ಚಿದೆ.

೨

ನಾಟ್ಯವಿಲಾಸಿಗಳ ಗುಂಪ
ಕಟ್ಟಿ ನಾಟಕಗಳ ಬರೆದು
ಧರ್ಮಮತಗಳನ್ನು ತೆಗಳಿ ಬಂಡನೆಬ್ಬಿಸಿ,
ನಿಂತೆ ಕುಸ್ತಿಕಣದೊಳಿದು
ಭುಜಗಳನ್ನು ಚಪ್ಪರಿಸುತ
ರಂಗವ ರಣರಂಗಗೆಯ್ದು ಮೆಯ್ಯನುಬ್ಬಿಸಿ.

ಸಮಾಜವಿದು ತ್ರಿಶಂಕುವೆಂದೆ,
ವಿಶ್ವಾಮಿತ್ರನ ಸೃಷ್ಟಿಯು.
ಡಾಂಭಿಕರನು ಬಯಲಿಗೆಳೆದೆ ಜಂಭವಳಿಯಲು.
ಹಳೆಯದಿರಲಿ ಹೊಸದೆ ಇರಲಿ,–
ಜಾತ್ಯಂಧತೆ ಧರ್ಮಾಂಧತೆ—
ಯೆಲ್ಲ ನಿನ್ನ ಹಿಡಿತಕುರುಳಿ ಭೂಮಿಗಿಳಿಯಲು

ಜನಿವಾರವ ಹರಿಯಿರೆಂದೆ
ಜನರಾಳ್ಕೆಯ ಮುರಿಯಿರೆಂದೆ
ಕಯ್ಯೆತ್ತುವ ಕುರುಬರಿರಲು ನಾಡೊಳೆಲ್ಲರು;

ಸ್ಥಾನಿಕ ರಾಜ್ಯವನು ಸುರುಳಿ-
ಸುತ್ತಿ ಮೂಲೆಗೊಗೆಯಿರೆಂದೆ;
—ಆಳಬಲ್ಲರಿದನು ಅಂದವಾಗಿ ಗೊಲ್ಲರು.

ಹಳ್ಳಿಗರನು ಮುರಿವ ಗೌಡ,
ಮೋಸಗೊಳಿಸುವಕ್ಕರಿಗನು,
ಜನಗಣತಿಯ ಮಧ್ಯ ಕುಡಿದ ರಾಜಕಾರಣಿ,
ಧರ್ಮಮತದ ಮಣ್ಣು ತುಂಬಿ
ಕಂಣು ಕಳೆಯುತಿರುವ ಕುರುಡ:
—ಇವರ ಮುರಿದ ದಿನವೆ ನಾಡಿಗಿಹುದು ಪಾರಣೆ.

ಸರಸ್ವತಿಯ ಡೊಂಬರಾಟ
ವಿದ್ಯೆಯಿಂದು; ತಳ್ಳಿಬಿಡಿ.
ಅನ್ನಸಮಸ್ಯೆಯನು ಬಿಡಿಸದಂಥ ವಿದ್ಯೆಯು
ವಿದ್ಯೆಯೆಂತು? ಭ್ರಮೆಯು ಬೇಡ.
ಇದ್ದುದನಿದ್ದಂತೆ ತೋರ-
ಲಳಿಯಬಹುದು ಜನದ ಕುಂಭಕರ್ಣನಿದ್ರೆಯು.

ವಿಧವೆಗಿಲ್ಲ ಕಲ್ಯಾಣವ-
ದೆಂದವರಿಗೆ ಸಾವಿತ್ರಿಯ
ಚರಿತವನ್ನು ತಿಳಿದು ನೋಡಿರೆಂದು ಹೇಳಿದೆ.
ಅಹಲ್ಯೆಯಂಥ ಸುಂದರಿಯನು
ವಯೋವೃದ್ಧನಾ ಗೌತುಮ
ಕೈ ಹಿಡಿಯಲು ತಪ್ಪಿದಾರದೆಂದು ಕೇಳಿದೆ.

ಅಶ್ವಮೇಧ ಯಾಗಗಳನು
ಗೆಯ್ದರು ಪೂರ್ವಿಕರು; ಕೃತಿ-
ಸ್ಪರ್ಧೆಗಳನು ಹೂಡಿಸಿದರು; ಕೃತಕೃತ್ಯರಾದರು.

ಜಾಮಾತರ ಶೋಧವಿಂದಿ-
ನವರಂಗಶ್ವಮೇಧವಹುದು ;
ಮಾರು ಗೆಲುವದಿರಲಿ ; ಮನೆಗೆ ಸೋತು ಭೃತ್ಯರಾದರು.

ಲೋಕಾರೂಢಿಗಳನಿಂತು
ನೆಲಕುರುಳಿಸಿ ನಿಂತೆ ನೀನು
ಸಂಧ್ಯಾಕಾಲದಿ ಸಂಹಾರವಿದೆ ಕಾರ್ಯವೆನ್ನುತ ;
ಮನ ನೊಂದವರಲ್ಲಲ್ಲಿಗೆ
ದೂರುತಿರಲು, ದೂರ ಸರಿದು
ಹೊಸ ಬಿತ್ತಿಗೆ ಪ್ರಳಯಕಾಲವಪರಿಹಾರ್ಯವೆನ್ನುತ.

೩

ವ್ಯಕ್ತಿತ್ವಕೆ ಕಳಸವಿಡಲು
ಹುಟ್ಟಿ ಬಂದಿತೀ ಸಮಾಜ-
ವೆಂಬ ಸಂಸ್ಥೆ ; ವ್ಯಕ್ತಿಯನ್ನೆ ನುಂಗಿ ನಿಲ್ಲಲು,—
ಅವ್ಯಕ್ತದ ಮಡಲಿನಲ್ಲಿ
ಸರಿಸುತದನು ಬೇರೆ ಹೊಂಚು-
ಹಾಕಿ ಮುಂದುವರಿವುದೆಂದೆ ಬಾಳ ಗೆಲ್ಲಲು.

ಭೂಲೋಕದೊಳಾವುದು ಸುಖ ?
ಒಬ್ಬೊಬ್ಬರಲೊಂದು ತರದ
ಚೆಲ್ವಿನ ಬೀಜವನು ಬಿತ್ತಿ ಬಾಳು ಕುಣಿವುದು.
ತನ್ನತನದ ಶಿಖರವನ್ನೆ
ಮುಟ್ಟಿ ತನ್ನ ವ್ಯಕ್ತಿತ್ವವ
ತಾನರಳಿಸೆ ಮನುಜನವನ ಹೃದಯ ತಣಿವುದು.

ತರಂಗಿಣಿಯು ಸಂರಕ್ಷಿಸ
ದಂಡೆಯಂತೆ ಪ್ರಕೃತಿ ಸಹಜ
ಬಾಳಿಗಿರಲು ಚೆನ್ನ. ಅಣೆಕಟ್ಟೆಯಂತೆಯೆ

ಜೀವನವನು ಕಟ್ಟಿಬಿಡಲು
ಬೇರೆ ನರಕವಾವುದಿಲ್ಲಿ ?
ಲೇಸಲ್ಲವೆ ಮರಣವಾಗ ಹುಟ್ಟಿದೊಡನೆಯೆ ?

ನಿಃಸ್ವಾರ್ಥದಿ ಬಾಳಿ ಬದುಕಿ
ಹಗೆಯಿಲ್ಲದ ಬಗೆಯೊಳಾಡಿ
ಕೂಡಿ ಬೆಳೆಯೆ ಮಾನವಕುಲವಹುದು ಭೂಷಣ.
ಧರ್ಮಮತಗಳನು ಕಟ್ಟಿದೆ-
ಏದರ ಸಾಧನಂಗಳೆಂದು :
ಬಂಧಿಸಲಿವು ನಮ್ಮಸುಗಳನೆಲ್ಲಿ ಪೋಷಣ ?

ಸತ್ಯದ ಬೆಳಕಿನಲಿ ಬಾಳಿ
ನುಡಿದಂತೆಯೆ ನಡೆದು ನಮ್ಮ
ಹೊರಗೊಳಗೊಂದಾಗಿ ಹೊಂದಲದುವೆ ಮೋಕ್ಷವು.
ಇಂತು ನಡೆವ ಮಾನವರಾ
ಸಮುದಾಯವೆ ನಿಜ ಸಮಾಜ ;
ಸಮರಸವಿದನುಳಿದುದೆಲ್ಲ ಬರಿ ಪರೋಕ್ಷವು.

ದೇಹಕಲ್ಲ ಮನಸಿಗಿಹುದು
ಮಡಿ ಮೈಲಿಗೆ ತಿಳಿದು ನೋಡೆ.
ಜಾತಿ-ನೀತಿಯೊಂದೆಯೆಂಬ ಲಂಬಕರ್ಣರು
ನಾಡೊಳಿರಲು ಮುಕ್ತಿಯೆಲ್ಲಿ ?
ಜಾತಿಸಂಕರವದಿಂದಿಗೆ
ಶಂಕರವೆಂಬುದನರಿಯಲಿ ನಾಡ ಶರಣರು.

ಚೇತನಗೊಳಿಸಿರುವೆ ನೀನು
ಧನೋನ್ನತಿಯ ಪದವಿಗೇರು-
ತಧೋಗತಿಯ ಯಾತನೆಗಿಳಿದಿರುವ ಸಾಧನು.





ಪಾರತಂತ್ರ್ಯ ತೊಲಗಲೊಡನೆ
ಸ್ವಾತಂತ್ರ್ಯವು ಬಾರದೆಂದೆ–
ಬದಲಿಸದಿರಲೆಮ್ಮ ಜನದ ಕಟ್ಟುಪಾಡನು.

ಅಂತೆಯೆ ಕೋಲಾಹಲವಿದು;
ಕ್ರಾಂತಿಯ ಹಾಲಾಹಲವಿದು
ಹಸ್ಸನ್ನಾಗಿಸಲ್ಕೈತಂದಿಹುದೀ ದೇಶದ ಪರಿಯ ;
ಕ್ರಾಂತಿಗೆ ತಲೆಬಾಗಿರಿ; ಭ್ರಾಂ-
ತಿಯ ತೊಲಗಿರಿ; ನವಧರ್ಮವ
ಸಂಸ್ಥಾಪಿಸಿ ಸಂವರ್ಧಿಸಿರೀ ಜನದೈಸಿರಿಯ.

ಅಂತೆಯೆ ಡಂಗುರ ಸಾರಿದೆ
ಬೆಂಕಿಯನನುದಿನ ಕಾರಿದೆ
ಸಂಕೇತದ ಸ್ಥಾನಕೆ ಜನಶಂಕರಿ ಬರಲೆಂದು ;
ಇಂದಿನ ಯುಗದಲಿ ಸಂಹಾ-
ರವೆ ಧರ್ಮವು ಕರ್ಮವಿದೆಂ-
ದೆತ್ತಿದೆ ನೀ ಶಸ್ತ್ರವ ಹೊಸ ಜಗವೈತರಲೆಂದು.

ಅಂತೆಯೆ ನಿನ್ನನು ಕಾಣುತ
ಭೂತವು ಕಂಗೆಟ್ಟೋಡಿದೆ;
ಇಂದಿನ ಜನದೆದೆ ಕಂಪಿಸುತಿತಿಮಿತಿಯಲ್ಲಿಹುದು.
ಮುಂದಿನ ಬಾಳಿನ ಭಾಗ್ಯವು
ನೀನೆಸಗಿದ ಹಾವಳಿಯನು
ಕಂಡೆಚ್ಚರವಾಗುತ ಮಂಜುಳ ಗತಿಯಲ್ಲಿಹುದು.

೪

ನಿನ್ನ ಕೃತಿಗಳಲ್ಲಿ ರೋಷ
ತುಂಬಿ ನಿಲುವದೊಂದು ದೋಷ-
ವೆಂದು ಕೋಮಲಾಂತಃಕರಣಿಗಳು ನೊಂದರು.

ಕಟುತರವೀ ವಿಡಂಬನೆಯು
ಹವಣ ಮೀರಿ ಮೊನೆಯುತೆಂದು
ರಂಗಭೂಮಿಯಲ್ಲಿ ನುಂತ ರಸಿಕರೆಂದರು.

ಆದರೊಂದು ವಿಕಟಹಾಸ್ಯ,
ಚತುರೋಕ್ತಿಯ ವಿದಗ್ಧತೆಯು
ಹೊಟ್ಟೆ ಹುಣ್ಣು ಹಿಡಿಯುವಂತೆ ಜನರ ನಗಿಸಿತು ;
ಮಾತಿನಲ್ಲಿ ಬರಹದಲ್ಲಿ
ಹೂತು ರಸಿಕರನ್ನು ಕೂಡ
ಮೈಮರೆಸುತ ನಗೆಗಡಲಿನೊಳವರ ನುಗಿಸಿತು.

ನೀನದೆನಿತೊ ಬವಣೆಬಟ್ಟು
ಹುದುಗಿ ನಾಡ ಕಟ್ಟುಪಾಡೆ
ಕೊಳೆತಿಹುದನು ಕಂಡುಹಿಡಿದು ಕೊಡಲಿಯೆತ್ತಿದೆ;
ಅಂತೆ ವಿಡಂಬನೆಯ ಬಾಣ-
ಗಳ ಮಳೆಗರೆಯುತಲೆಲ್ಲೆಡೆ
ಅಂಧಶ್ರದ್ಧೆಯಾಳುವ ಕೋಟೆಗಳ ಮುತ್ತಿದೆ.

ಬೆಳುವಲ ನಾಡೊಳಿಹ ಕೆಚ್ಚು
ಶಾಲ್ಮಲೆಗಿಹ ನಿರ್ಭರತೆಯು
ಶ್ವೇತದೀಪದಲ್ಲಿಹ ಸ್ವಚ್ಛಂದವೆಲ್ಲವೂ
ಮುಪ್ಪುರಿಗೊಳ್ಳುತ ನಿನ್ನಯ
ವಾಗ್ಝರಿಯಲಿ ಹರಿಯುತಿಹವು ;
ಗುಪ್ತ ಸರಸ್ವತಿಯು ನಿನ್ನ ವಾಣಿಯಲ್ಲವು.

ಕೂರಲಗದು ನಿನ್ನ ಬುದ್ಧಿ,
ಸೂಕ್ಷ್ಮದರ್ಶಿ ನಿನ್ನ ನೇತ್ರ,
ವ್ಯಕ್ತಿಸ್ಥಿರ ನಿನ್ನ ಮನವ ಸೆಳೆಯುವಾಶ್ಯವು.

ಬೇರೆಯಾತ್ಮವಿಲ್ಲವೆಂದೆ;
ಸಮರಸದಲಿ ಹೊಂದುತಿಹ ಸ-
ಮಷ್ಟಿಯಹುದು ನೀನು ಕಂಡ ಪರಮಾತ್ಮನು.

ದಿವ್ಯವಾದ ಬಾಳ ಹೊನಲು
ಮಡುವುಗೊಳ್ಳುತಲ್ಲಲ್ಲಿಗೆ
ಸಂಸ್ಥೆಗೊಳುತ,—ವೀಚಿಯಿರಲು ಪಾಚಿ ಹಾವುಸೆ,
ಮಳೆಗಾಲದ ಮೊಳಗಿನಂತೆ
ನಿನ್ನಂತಹರನು ಹುಟ್ಟಿಸಿ
ಪೊರೆಯುತಿಹಳು ಪ್ರಕೃತಿದೇವಿ, ಮೊಳೆಯೆ ಭರವಸೆ.

ಮಧುಮಾಸದ ಮಂದಾನಿಲ
ಬೇಕು ; ಗ್ರೀಷ್ಮಚಂಡಕಿರಣ
ಬೇಕವ ; ವರ್ಷಾಕಾಲದ ವರುಣ–ಮಾರುತ
ಬೇಕೆಬೇಕು; ಬರಲಿವರಿ-
ಲ್ಲರು ದೂರಿಹುದೆಂತು ಮಾಗಿ ?
ಹೊಂಬೆಳೆಯಿರೆ ಸ್ವರ್ಣಯುಗದ ಬರವ ಸಾರುತ.

ಆಕಾಶದಿ ಸಂಚರಿಸುವ
ಸಿಡಿಲಿನಮರಿ ನಿನ್ನಯ ನುಡಿ ;
ಕಾರ್ಗಾಲದ ಹೊಸ ಹೊಂಚ್ಯ ನಿನ್ನೀ ಜೀವನವು ;
ಮೊಳಗಿನ ಧ್ವನಿಯಿಂದಂಜಿಸಿ,
ಮಿಂಚೈತರೆ ಮನರಂಜಿಸಿ,
ಧೋ ಧೋ ಎನ್ನುತ ಸುರಿವುದು ನಾಡಿಗೆ ಪಾವನವು.

ಮಿಂಚಲಿ ನಿನ್ನಯ ಹಾಸ್ಯ ; ಚ-
ಳಂಚಲೆಯಲಿ ನಿನ್ನ ವಾಣಿ ;
ಸಂಚಯಿಸಲಿ ನಾಡು ನಿನ್ನ ಕೃತಿಗಳತ್ತ ಕಾಣ್ಕೆಯ.

ಸ್ಮೃತಿಪಟಲದಿ ವಿರಾಜಿಸಲಿ
ನಿನ್ನ ಮನುಸ್ಮೃತಿಯು ತಂದ
ಮನ್ವಂತರದೊಂದು ಶ್ರುತಿಯು ಹಸನಗೆಯ್ದು ಮಾಳ್ಪೆಯು.

---

## ೪. ಕಲೋಪಾಸಕನಾದ ಉಪದೇಶಕ

೧

ಬಾಲಬ್ರಹ್ಮಚಾರಿಯಾಗಿ
ಬ್ರಹ್ಮಚರ್ಯೆಯಾಜನ್ಮವು
ದಿನಚರ್ಯೆಯದಾಗಿರಲೆಂದೊಂದು ವ್ರತವ ಹೂಡಿದೆ.
ಗಾಂಧಿಯುಗದಿ, ನೇಮನಿಷ್ಠೆ-
ಯಿಂದ ಬಾಳಿ ಸನ್ಯಾಸವ
ತಾರುಣ್ಯದ ಬರವಿಗಿಂತ ಮೊದಲೆ ನೀನು ಕೂಡಿದೆ.

ಸಾಲೆಹುಡುಗರೆದುರು ನಿಂತು
ಬ್ರಹ್ಮಚರ್ಯ! ಬ್ರಹ್ಮಚರ್ಯ!
ಮುದುಕರೋಳಿಯಲ್ಲಿ ಬ್ರಹ್ಮಚರ್ಯವೆಂದು ಕೂಗಿದೆ.
ಕೂತ ನಿಂತ ಕಡೆಗೆ ನೀನು
ಬ್ರಹ್ಮಚರ್ಯವೆಂದೊರಲಲು
ಜನಗಣನೆಗೆ ತಾರದಿಹುದ ಕಂಡು ಮತ್ತೆ ರೇಗಿದೆ.

ನಾಡನೆಲ್ಲ ಸುತ್ತಾಡಿದೆ;
ಎಲ್ಲ ತರದ ಜನಗಳೊಡನೆ
ಬೆರೆದೆ; ಕಾಣಲಿಲ್ಲ ನಿನಗೆ ಕಿರಿಯಾಸೆಯ ಕಿರಣವು.
ದೇಶವೆಲ್ಲ ಶಾಪಗ್ರಸ್ತ,—
ನಿರ್ವೀರ್ಯದ ನಿಕರವೆಂದೆ;
ಮಂದಿ ಹಂದಿಯೆನ್ನುತೊಳಗೆ ತಲ್ಲಣಿಸಲು ಹರಣವು.

ದೇವದೂತನಂತೆ ನೀನು
ಭಾರತಸಂಚಾರಿಯಾಗಿ
ಕಂಡ ದೃಶ್ಯದಿಂದ ನಿನ್ನ ಹೃದಯ ದೀರ್ಣವಾಯಿತು.

ನಾಡ ಪಂಚಪ್ರಾಣಗಳನು
ತಿರುಗಿ ತರುವ ಸಂಜೀವಿನಿ
ಯಾವುದೆಂಬ ಯೋಚನೆಯಲಿ ಮನವು ಕೀರ್ಣವಾಯಿತು.

ಆಗ ನಿಂತೆ ಪರಶುರಾಮ-
ನಂತೆ ನೀನು ಕೊಡಲಿಯೆತ್ತಿ;
ಕೌಶಿಕನಂತಪ್ಪಳಿಸುತ ಜಟೆಯ, ಧ್ವನಿಯನೇರಿಸಿ
ತಾಮಸವನು ತರಿವುದೆಂದೆ;
ದಯೆಯುರಿವೇ ಇಲ್ಲವೆಂದೆ;
ಗರ್ಜಿಸಿದ್ದೆ ನಿತ್ಯ ನಾಡ ಜನವನು ಹೌಹಾರಿಸಿ.

ಧರ್ಮಮತಗಳನ್ನು ಜರಿದೆ;
ಸ್ವಾಮಿಗಳನು ಬಯಲಿಗೆಳೆದೆ;
ಕಾಮಿಗಳನು ವಿಡಂಬನೆಯ ಯಮಲೋಕದಿ ಪೀಡಿಸಿ
ಗಾಸಿಗೊಳಿಸಿ ಶಿಕ್ಷಿಸಿದ್ದೆ;
ವಿಲಾಸಿಗಳ, ಮೈಗಳ್ಳರ
ದಂಡಿಸಿದ್ದೆ ಮುನಿಸಿದ ಹಿರಿಗಾಣಗಳಿಗೆ ಹೂಡಿಸಿ.

ತರುಣರು ನಿರ್ವೀರ್ಯರೆಂದೆ;
ಸ್ತ್ರೀಯರು ಬರಿ ಪಶುಗಳೆಂದೆ;
ಹುಟ್ಟಿ ಸಾಯ್ವ ಹುಳಗಳೆಂದೆ ಹುಡುಗರಿಮ್ಮ ದೇಶದಿ.
ಬಡವಗೆ ಗೋಳೊಂದೆ ಸೊತ್ತು;
ದಿನದ ಬಾಳ್ವೆಯೊಂದು ಕುತ್ತು:
ಕೊಳೆವೆವೆಂದೆ ಸಿಲುಕಿ ಶ್ವೇತದೀಪದವರ ಪಾಶದಿ.

ಪುನರುಜ್ಜೀವನಗೆಯ್ಯಲು
ಕಳೆದ ಬೆಳಕ ಮತ್ತೆ ತರಲು
ಲೇಖನಿಯನು ಕೆನ್ನೀರೊಳಗದ್ದಿ ಕಥೆಯ ಬರೆದಿಹೆ;

ರಂಗಭೂಮಿಯೆಡೆಗೆ ಧುಮುಕಿ
ನಾಟಕಗಳ ಹೊಂಚು ಹಾಕಿ
ಕಂಪನಿಗಳ ಬೆನ್ನುಹತ್ತಿ ನಾಡನೆಲ್ಲ ತಿರುಗಿಹೆ.

ಮಾಸಿಕಗಳ ಸಾಗಿಸಿದ್ದೆ
ಯುಗವನೆ ಪಲ್ಲಟಿಸಲೆಂದು;
ನಾಡಿನೆಳೆಯರನು ತಿದ್ದಲು ಬಾಲವನವನು,
ಬಾಲಪ್ರಪಂಚವನು ನಾಡ
ಹಿರಿಕಿರಿಯರು ಕಲಿಯಲೆಂದು
ತೆರೆದೆ, ಬರೆದೆ ಹಿಗ್ಗಿಸುತ್ತ ನಿನ್ನ ಮನವನು.

ಆಹಾರಾರೋಗ್ಯಗಳನು
ತಿಳಿಯದಂಥ ಪಾಕಶಾಲೆ
ನಮ್ಮ ನಾಡಿದೆಂದು, ಹೊಂದುತದರ ಜ್ಞಾನವ,
ಬರೆದೆಯೊಂದು ಹೊತ್ತಿಗೆಯನು
ಜೀವಾತುಗಳೊಂದು ಪಟ್ಟಿ-
ಯನ್ನು ಕೊಟ್ಟು ಕಳೆಯಲೆಸಗಿ ಜನದ 'ಗ್ನಾನ'ವ.

ಇಂತು ಕ್ರಾಂತಿಪುರುಷನಾಗಿ
ನೀ ಭವಿಷ್ಯವಾದಿಯಂತೆ
ವೀರಾವೇಶದಲಿ ಕೂಗಿ ಹೋರಾಡಿದೆ
ವೈಷಮ್ಯಗಳೆದುರು ನಿಂತು;
ಕಾಲಪುರುಷನಾಗಿ ಕುಣಿದು
ಧ್ವಂಸನವೇ ಕಾರ್ಯವೆಂಬ ಮಾತನಾಡಿದೆ,

ಜರಾಸಂಧನಂತೆ. ನೀನು
ಹೋಳಾಗಿಸಿದೀ ಸಮಾಜ-
ವಿಡಿಯಾಗುತ ಮತ್ತೆ ಕಾದಲಣಿಗೊಂಡಿತು;

ನೀನು ಕೊಂದ ಸರತಿಗೊಮ್ಮೆ
ಚೇತನಗೊಂಡೆದ್ದು ಮತ್ತೆ
ಮಾರ್ಮಲೆಯಲು ಸಿದ್ಧವಾಗುವಂತೆ ಕಂಡಿತು.

ಯುದ್ಧಿಸುವುದು ಬೇಸರಾಗಿ,—
ಧರೆಯೆ ರಣಾಂಗಣವಾಗಲು
ಬದುಕಿದೆಲ್ಲ ಬರಿಯ ಕದನದಲ್ಲಿ ಕಳೆವುದೆ ?
ಕೇಳ್ದೆ ನೀನು : ಪಾಪರಾಶಿ-
ಯನು ಸಮೂಲವಾಗಿ ಪರಶು—
ರಾಮನಂತೆ ಸಂಹರಿಸಲು, ಮತ್ತೆ ಬೆಳೆವುದೆ ?

ಆಗ ನಿನ್ನ ಕಣ್ಣು ತೆರೆದು
ಪಾಪದೊಡನೆ ಪುಣ್ಯ, ರೂಪ-
ವದು ವಿರೂಪದೊಡನೆ ಬೆರೆತ ಮೋಡಿ ಬುವಿಯಲಿ
ಹಬ್ಬಿರುವದು ಕಂಡು ಬಂತು ,
ಮತ್ತೆ ಮುಂದೆ ಕೇಳ ಬಂತು
ಲಲಿತ ಕಲಾಕನ್ಯೆಯ ಮೆಲುದನಿಯು ಕಿವಿಯಲಿ.

೨

ಭಾರತಸಂಚಾರಿಯಾಗಿ
ನೀನಂಡಲೆದಿಹ ಕಾಲದಿ
ಕಂಡ ಚೆಲುವು ಹೃದಯವನ್ನು ತಾನೆ ತಣಿಸಿತು ;
ವಾಸ್ತುಶಿಲ್ಪ ಮೋಹಿಸಿತ್ತು ;
ಮೂರ್ತಿಶಿಲ್ಪ ತನ್ನ ನೂರು
ವಿಧದ ಚೆಲುವ ತೋರಿ ಮನಕೆ ನೀರು ಹಣಿಸಿತು.

ಅಂತೆ ಚಿತ್ರಕಲೆಯ ಕಲಿತೆ,
ಫೋಟೊಗ್ರಾಫಿಯಲ್ಲಿ ನುರಿತೆ
ಕಂಡ ಚೆಲುವ ಪಡಿಮೂಡಿಸುವಾಸೆ ಮೊಳೆಯಲು ;

ನೀನು ಮೂಡಿಸಿದ್ದ ಪ್ರತಿಮೆ
ಹೂವು, ತಳಿರು, ಪ್ರಕೃತಿ ನೋಟ
ಮನವನರಳಿಸುತ್ತ ಕಾಂತಿವಡೆದು ಹೊಳೆಯಲು.

ದಕ್ಷಿಣ ಕನ್ನಡವು ನಿನ್ನ
ತವರುಸೀಮೆ. ಅಲ್ಲಿ ನಿಂತು
ನಗುವ ಚೆಲು ನಿಸರ್ಗವನ್ನು ಸಂಗ್ರಹಿಸಿದೆ
ಚಿತ್ರಮಾಲೆಯಾಗಿಸುತ್ತ ;
ಅಚ್ಚುಗೊಳಿಸಲಾದ ವೆಚ್ಚ
ತಿರುಗಿ ಬಾರದೆಂದು ನೀನು ಮೊದಲೆ ಗ್ರಹಿಸಿದೆ.

ರಂಗಭೂಮಿಗೊಲಿದ ನೀನು
ದೃಶ್ಯಕಾವ್ಯದೊಂದು ರಸವ
ಕಂಡು ನಲಿವ ತುಂಬಿಯಾದೆ, ಬರಿ ಪ್ರಚಾರವ
ಮೂಲೆಗೊತ್ತಿ ; ಜಾನಪದದ
ತಾನ-ಗಾನಗಳಿಗೆ ಲುಬ್ಧ-
ನಿರಲಳಿಸಿದೆ ನೀತಿ ಹೊರಿಸಿದಂಥ ಭಾರವ.

ತುಂಬಿಗರೊರೆಯುತಿಹ ಹಾಡು,
ಹೊಲತಿಯರಾ ಗಾನಲಹರಿ,
ಯಕ್ಷಗಾನವೊಂದ್ಯೆಸಿರಿ ಮನವ ಹಿಡಿದವು,
ಆನಂದವೆ ಬಾಳಿನ ಗುರಿ
ಬರಿಯ ಕದನವಲ್ಲವೆಂಬ
ಸಂದೇಶವ ತಂದು ಹೃದಯುವನ್ನು ಮಿಡಿದವು.

ಬಾಳಿನ ಸುಖದುಃಖಗಳನು
ನೃತ್ಯದನಿಯಲಿ ನಿಲ್ಲಿಸುತ್ತ
ರಾಗವಾಗಿ ಮಿಡಿಯಲೊಡನೆ ಜನತೆಯೊಲುಮೆಯು

ತಾನೆ ತೆರೆಯುತಿರಲು ನಾಡ
ನಡೆ-ನುಡಿಯನು ತಿದ್ದಲೆಂದು
ಕೊಡಲಿಯ ಸನ್ನಾಹವೇತಕೆಂದೆ, ಬಲುಮೆಯು.

ನಟನಾಗುತ ಚಲಚ್ಚಿತ್ರ-
ದಾಕಾಶದಿ ಮಿಂಚುತೊಮ್ಮೆ
ನಾಟ್ಯೋತ್ಸವ ಮನವ ಕೊಳಲು ನೃತ್ಯಕೆಂದು ನೀಡಿದೆ
ನಿನ್ನೊಲವನು. ಕಾಲನಾಗಿ
ವ್ಯಾಧನಾಗಿ ರಾಮನಾಗಿ
ಚಿಗರೆಯಾಗಿ ಬೊಗರೆಯಾಗಿ ಸಿರಿಗುಣಿತವ ಹೂಡಿದೆ.

ಬಾಲರೆಲ್ಲ ತಾವೆ ಬ್ರಹ್ಮ-
ಚಾರಿಗಳಾಗಿರುವದರಿಂತು
ಬಾಲವನದ ಬಾಲಕರಿಗೆ ಕುಣಿತ-ಮಣಿತ ಕಲಿಸಿದೆ.
ತೆರವಾಗಿಹ ನಿನ್ನ ಹೃದಯ
ಕಂಡಿತವರ ಜೊತೆಯೊಳೊಲವ.
ನಾಡಹಬ್ಬದಲ್ಲಿ ಬಾಲ ನಟರ ಮುಂದೆ ನಿಲಿಸಿದೆ.

ಬೇರೆ ಬೇರೆ ನಿಟ್ಟನಿಂದ
ಸಾಹಿತಿಗಳನೆಲ್ಲ ಕರೆಸು-
ತವರ ನೇಹ-ನಲುಮೆಯಿಂದ ಮನವನು ಸಂತವಿಸಿದೆ;
ನಿನ್ನ ಮನಕೆ ಬಂದ ಕೆಲವು
ನೇಹಿಗರನ್ನಾಯ್ದುಕೊಳುತ
ಸಾತ್ವಿಕ ಸಂವಾದವಿತ್ತ ಸ್ಫೂರ್ತಿಯನನುಭವಿಸಿದೆ.

ಇಂತು ಜಟೆಯನಪ್ಪಳಿಸಿದ
ಪ್ರಚಾರಕನು ಮರೆಯಾದನು;
ಕವಿಯಾದನು; ಜೀವನವಿದು ಲೀಲೆಯೆಂದನು.

ಸೃಷ್ಟಿಯಾದಿಯೊಡನೆ ಜನಿಸಿ
ಬೆಳಕದೊಂದು ತಮಸಿನೊಡನೆ
ಕಾದಿ ಮುಕ್ತದ್ವಾರಕೆಮ್ಮನೊಯ್ಯುವೆಂದನು.

ಆಗ ನಿನ್ನ ನೇಹಬಳ್ಳಿ
ಬಳ್ಳಿವಳ್ಳಿಯಾಗಿ ಕೊನರಿ
ಪಾಪವನ್ನು ಕರುಣೆಯಿಂದ, ಪ್ರೀತಿಯಿಂದಲೂ
ಪುಣ್ಯವನಾಚ್ಛಾದಿಸಿತ್ತು;
ಜೀವವು ಸಮ್ಮೋದಿಸಿತ್ತು
ವಿಶ್ವದೆದೆಯನೊಂದುಗೂಡಿ ಸುಖವ ಹೊಂದಲು.

ನಿನ್ನ ಬಾಳಿಗೊಂದು ಮುಕುಟ-
ವನ್ನು ತೊಡಿಸಿ ಲೀಲೆಯಿಂದ
ಬಂದಳಾಗ ನೃತ್ಯತರಂಗಗಳನೇರುತ,
ಬಾಳಿನ ಸಿರಿಗಡಲು ತಂದು
ಕಾಣ್ಕೆಯಿತ್ತ ಚದುರ ಕನ್ಯೆ
ಪ್ರೀತಿಯ ಪರಮಾಧಿಕ್ಯವನೊಡನೆ ಸಾರುತ.

೩

ನಗೆಯ ಬಗೆಯನಿಂದರಿತಿಹೆ.
ಹಳ್ಳಿಯವರ ಬಳ್ಳಿಗುರುಡ-
ತನವನರಿತು ನಗೆಯಾಡುವೆ ಕೋಪವಿಲ್ಲದೆ;
ಬಯಲಿಗೆಳೆದು ಪಟ್ಟಣಿಗರ
ಮೌಢ್ಯಗಳನು ತೆರೆದು ತೋರಿ
ತಿಳಿವನೀವೆ ಬಾಯ್ತೆರೆಯಲಿ ಶಾಪವಿಲ್ಲದೆ.

ಆಳವಾದ ಕರುಣೆಯೊಂದು
ನಿನ್ನೆದೆಯನು ಕಲಕುತಿಹುದು;
ತುಂಬಿ ತುಳುಕುತಿಹುದು ಶಬ್ದಶಬ್ದದಲ್ಲಿಯೂ.

ನೀನೊರೆದಿರುವಮರಕಾವ್ಯ-
ದಲಿ ಸೊಗಯಿಸಿ ತನಿರಸದೊಲು,
ಬಣ್ಣಿಸಿರುವ ಸೋಮಿಯ ಪ್ರಾರಬ್ಧದಲ್ಲಿಯೂ.

ಮಣ್ಣಿನಲ್ಲಿ ತಲೆಯೆತ್ತುತ
ಮರಳಿ ಮಣ್ಣಿನಲಿ ಮರೆಯಿಹ
ನರನ ಬಾಳ ಹಿಗ್ಗು-ತಗ್ಗುಗಳನು ರೂಪಿಸಿ
ನಿಂತೆ ನೀನನಂತಕಾಲ-
ವನು ಹಿನ್ನೆಳಲಾಗಿಸುತ್ತ
ನಿಶ್ಚಲ ನಿರ್ಭೇದ್ಯ ದೃಷ್ಟಿಯಿಂದ ದೀಪಿಸಿ.

ನಿನಗೆ ಲಭಿಸದಂಥ ಜ್ಞಾನ
ನಿನಗೆ ನಿಲುಕದಿರುವನುಭವ-
ವಾವುದಿಲ್ಲಿ? ವಿಜ್ಞಾನವ, ಲಲಿತ ಕಲೆಯನು—
ಕಾವ್ಯ, ಚಿತ್ರ, ಶಿಲ್ಪ, ನೃತ್ಯ-
ವೆಲ್ಲವ ಕರತಲಾಮಲಕ-
ವಾಗಿಸಿದ್ದೆ ಗುರುತಿಸುತ್ತ ಬಾಳ ನೆಲೆಯನು.

ಹೆಣ್ಣಿನ ಹೃದಯವನು ಬಲ್ಲೆ,
ಎಳೆಗರುಳಿನ ಹಂಬಲವನು;
ಅಕ್ಕರಿಂಗರ, ಬೆಳ್ಳಕ್ಕರಿಂಗರನು ತಿಳಿದಿಹೆ;
ಜಲಗಾರರನಂಬಿಗರನು,
ಸಿರಿವಂತರ, ಗುಣವಂತರ-
ನೊಂದೆ ನ್ಯಾಯದಂಡದಿಂದ ತೂಗುತಳೆದಿಹೆ.

ಮಾನಿಸನಾಗುತ್ತ ಜನಿಸಿ
ಮಾನವಕುಲದುಚ್ಚ ಗುಣಸ-
ಮುಚ್ಚಯವಿಲ್ಲದಿಹ ಬದುಕದೇತಕೆನ್ನುವೆ.

ಸ್ನೇಹ, ನಲುಮೆ, ಭಕ್ತಿ, ಕರುಣೆ,
ಸಾನುಭೂತಿಯಿಲ್ಲದಂಥ
ಸ್ವರ್ಗವು ಸಹ ನರಕವೆಂದು ನೀನು ಬಗೆಯುವೆ.

ವೇದಾಂತವದೇನೆ ಇರಲಿ;
ರೋದೋಂತವ ಮುಸುಕಿಬಹುದು
ಹಿರಿಯ ಬೆಳಕದೊಂದು ಯುಗಗಳಾದಿಯಿಂದಲೂ;
ಕತ್ತಲೊಡನೆ ಸಮರಗೆಯ್ದು
ಬಳಿಗೈತರಲಮರಜ್ಯೋತಿ
ಲೋಕಾಲೋಕಗಳ ಮೂಲೆಮೂಲೆಯಿಂದಲೂ.

ಕಾಲಪುರುಷ ಹೊಂಚು ಹಾಕಿ
ಕರ್ಮಜಾಲವನ್ನು ಬೀಸಿ
ಸ್ಥಿತಿ-ಲಯಗಳ ಸಂಚಿನಿಂದ ಸೃಜಿಸುತಿರುವನು
ಹೊಸ ಜಗವನು, ಹೊಸ ಯುಗವನು;
ಕನಸಿನ ಮೇಲ್ ಸವಿಗನಸನು
ಕರುಣಿಸುವಾ ಹಿರಿ ಬೆಳಕನು ಭಜಿಸುತಿರುವನು.

ಹಿರಿ ಹುಮ್ಮಸದೀ ಗಾನದಿ,
ನಟರಾಜನ ನಾಟ್ಯದಲ್ಲಿ,
ಸ್ವಾರ್ಥಲೋಲುಪತೆಯ ಬಿಸುಟು ನಾವು ಧುಮುಕುವಾ;
ಕಾಮ-ದ್ವೇಷದಿಂದ ಧರೆಗೆ
ಬಂದೊದಗಿದ ಗಾಯವ ಮಾ-
ಯಿಸಲೊಲುಮೆಯ ಮಂತ್ರೋದಕಗಳನು ಚಿಮುಕುವಾ.

ನಿಷ್ಕಾಮದ ಜೀವಿತವದು
ಧರ್ಮಸಮನ್ವಯದ ಸಾರ;
ಮಾನವಧರ್ಮದ ಗುರಿಯದು; ಬೇರೆ ಧರ್ಮವಿಲ್ಲವು.

ದೇವತ್ವವದೇನೆ ಇರಲಿ ;
ಮಾನವತ್ವವನ್ನೆ ಪೂರ್ಣ-
ಗೊಳಿಪ ಗೆಯ್ಮೆಯುಳಿದು ನರಗೆ ಬೇರೆ ಕರ್ಮವಿಲ್ಲವು.

ಇಂತು ನೀನು ಮಾನವಕುಲ-
ದುಜ್ವಲ ಭವಿತವ್ಯತೆಯನು
ನಂಬುತಂತೆ ನಿಂತೆ ನಿನ್ನ ದಿನದ ಬಾಳ ನೀಡುತ.
ಧರಾಚಕ್ರವುರುಳುತಿರಲು
ತಿಳಿಯುತದರ ಗತಿಯೆಲ್ಲವ
ಮನುಕುಲಮಣಿಯಿಹುದೆ ಧ್ಯೇಯವೆಂಬ ಹಾಡ ಹಾಡುತ.

ಬಾಲವನವದಿಂದು ನಿನ್ನ
ನಲುಮೆಯು ಬೀಡಾಗುತಿರಲು
ಚೊಕ್ಕತನದಿ ಬಾಳಿ ವೇಳೆ ಬರಲು ತೆರಳ್ವುದೆಂದಿಹೆ.
ಜೀವನವನು ಪೂರ್ಣಗೊಳಿಸಿ
ನಾಡಿಗದರ ಸ್ಫೂರ್ತಿಗಳನು
ಸಲ್ಲಿಸುತ್ತ ದೈವ ತೋರಿದೆಡೆಗೆ ಹೊರಳ್ವುದೆಂದಿಹೆ.

ರಂಗಭೂಮಿ, ವಿದ್ಯೆ, ಶಿಲ್ಪ,
ಲೇಖನವ್ಯವಸಾಯಗಳನು
ಸಾಗುಗೊಳಿಸಿ ಚಂದನದುದ್ಯಮವನಿಂದು ತೆರೆದಿಹೆ;
ಕೈಗೆ ಬಂದ ವೃತ್ತಿಯಹುದು
ಹಿಗ್ಗು-ಹಿರಿಮೆಯೆಂದೆ; ಬಾಳ
ಸಿಂಗರಿಸುವ ಕರ್ಮವೆಲ್ಲ ಪಾವನವೆಂದೊರೆದಿಹೆ.

## ೫. ರೂಪಾರಾಧಕ

ಪೆನ್ನಿನಲ್ಲಿ ಮಸಿ ತುಂಬುವ
ಗಾಜುಗೊಳವೆಯಿಂದ ನೀನು
ಕಾಫಿಯಲ್ಲಿ ಹಾಲನು ಹನಿಬಿಡುವಿಯೆಂದರು.
ಹನಿಯು ಹೆಚ್ಚು ಹನಿಯು ಕಡಿಮೆ-
ಯಿರಲು ಪೇಯ ಹೇಯವೆಂದು
ತುಟಿಗೆ ತಾರದದನು ಬಿಟ್ಟುಕೊಡುವಿಯೆಂದರು.

ನಿನ್ನ ಚೆಲುವ ಕವನಗಳನು
ಅಂದವಾಗಿ ಮುದ್ರಿಸಿಡಲು
ಹೊತ್ತ ಸಾಲಕೆಲ್ಲ ದುಡಿಮೆ ಸಾಲದೆಂದರು.
ಕಾವ್ಯರಂಗದಲ್ಲಿ ಕವಿಯು ;
ಅರೋಚಕಿಯು ಬಾಳಿನಲ್ಲಿ :
ಎಂದು ಕಂಡ ಹಾಗೆ ನಿನ್ನನಾಡಿಕೊಂಡರು.

ಕಾವ್ಯದಲ್ಲಿ ಬರಿಯ ರೂಪ
ನಿನ್ನ ಕಣ್ಣ ಸೆರೆಹಿಡಿಯಿತು ;
ತಿರುಳನಾಯ್ವ ರಸಿಕರನ್ನು ಜರಿವೆಯೆಂದರು.
ಡೊಂಕುಗೆರೆಯು, ಸರಲರೇಖೆ,
ಕಣಿವೆದಾರಿಗಿರುವ ಮಣಿತ,—
ಶಬ್ದಸೃಷ್ಟಿಯಲ್ಲು ಇದರ ಪರಿವೆಯೆಂದರು.

ಕವನಕೊಂದು ತಾಲ ರಾಗ ;
ಅಂಟಿತು ಸಂಗೀತರೋಗ :
ಸ್ವರದಿಂಚರಕಸುವ ಮಾರಿಕೊಂಡೆಯೆಂದರು.

ಮಾತುಗಾರನಾಗಿ ನಿಂತು
ಮಾತಿನೊಂದು ಸೂರು ಹಿಡಿದು
ನುಡಿಯ ಮೇಲೆ ನುಡಿಯ ತೂರಿಕೊಂಡೆಯೆಂದರು.

ಒಂದು ಮರದ ನೆಳಲಿನಲ್ಲಿ
ಬೆಳೆದು ನೀನು ಮರವಾಗದೆ
ಕಿರುತರುವಾಗಿರುವೆಯೆಂದು ಹಲವರೆಂದರು.
ತಾರತಮ್ಯ ವಿನಯವಾಗಿ
ಕೀಸರಿಡುವ ಸೀಮೆಯಲ್ಲಿ
ಉಸಿರು ಕಟ್ಟಿ ಗೆಲುವ ಕಳೆದುಕೊಂಡೆಯೆಂದರು.

೨

ಅಂದರಿದನು ಅಂದರದನು ;
ಏನೆಂದರದೇನು ನಿನಗೆ ?
ನೀನು ನೀನೆಯಾಗಿ ನಿಂತು ಬೆಳಕ ಬೀರುವೆ.
ಶ್ರುತಿಸುಂದರ ಕಾವ್ಯದಲ್ಲಿ
ವಾಗರ್ಥವ ತೇಲಿಸುತ್ತ
ಜೀವ ಕಂಡ ಸವಿಯ ಲೋಕಕೆಲ್ಲ ಸಾರುವೆ.

ನಿನ್ನ ಚೆಲುವಿನಾರಾಧನೆ-
ಯೊಂದು ಯೋಗವೊಂದು ಭೋಗ.
ಅದಕೆ ಪಟ್ಟ ಕಷ್ಟವೆಲ್ಲ ಸಫಲವೆನ್ನುವೆ.
ಸಣ್ಣಮಾತು ಸಣ್ಣ ರೀತಿ-
ಯಲ್ಲಿ ಮೂಡದಂಥ ಬಣ್ಣ
ಬಿಣ್ಪಿನಲ್ಲಿ ಬರುವದೆಂತು? ವಿಫಲವೆನ್ನುವೆ.

ಕಡಲ ತೀರದಲ್ಲಿ ಜೊತೆಯ
ರಸಿಕರಾಟವಾಡಿ ನೋಡು-
ತುಂಬಿಸಿಲಲಿ ಮಳಲಿನಲ್ಲಿ ದಾಹಗೊಂಡಿರೆ,

ನೀರ ಕಾಳು ಸಿಗದೆ ಹೋಗಿ
ಹಸಿವೆ ಹೆಚ್ಚಿ ಹಿಂಗದಾಗಿ
ದಣಿವಾರಿಸೆ ನೆಳಲಿಲ್ಲದೆ ಮೋಹಗೊಂಡಿರೆ,

ಬಕ್ಕ ತಲೆಯಲಿಂತು ನೀನು
ಅರಳಿದೊಂದು ಕುಸುಮದೆದುರು
ನಿಂತು ಕ್ಷುಧೆ-ಪಿಪಾಸೆಗಳನು ಮರೆತು ನೀಡಿದೆ
ನಿನ್ನ ಕಣ್ಣ್ಣನದರ ಸಿರಿಗೆ
ನೆನೆಸುತದರ ಮಾದರಿಯನು;
ಹೂವಿನಲ್ಲಿ ಹೂವಾಗುತ ಬೆರೆತು ಕೂಡಿದೆ.

ಚೆಲುವಿನ ಮಾಲಕುಮಿಯಿವಳು
ವರ ಮಾನಸಪುತ್ರಿಯೆನಲ್ಲು—
ಎಲ್ಲಕಿಂತ ಬಗೆಯೆ ಮೇಲದೆಂದು ಸಾರಿದೆ.
ಬಗೆಯನು ನಡೆ-ನುಡಿಗಳಲ್ಲಿ
ದಿನಂದಿನದ ಬಾಳಿನಲ್ಲಿ
ಸಿಂಗರಿಸುವ ಜಾಣು ನಿನ್ನೊಳೊಂದೆ ಸೇರಿದೆ.

ಲೋಕದಾಚೆಗಿರುವದೇನೊ
ತಿಳಿಯೆ. ಲೋಕದಲ್ಲಿ ಸೊಬಗ
ಕಾಣ್ಬ ಕಣ್ಣೆ ನಿನ್ನ ಜೀವವೆಂದು ನುಡಿದಿಹೆ.
ಲೋಕ ಸಟೆಯೊ ದಿಟವೊ ಕಾಣೆ.
ಜೀವಚಕ್ಷು ಸತ್ಯವೆಂಬ
ಶ್ರದ್ಧೆಯಿಂದ ಬಾಳ ಬಟ್ಟೆಯಲ್ಲಿ ನಡೆದಿಹೆ.

ವಿಶ್ವಕರ್ಮನೆಂಬ ಶಿಲ್ಪಿ
ವಿಶ್ವಪ್ರಯತ್ನವನು ಮಾಡಿ
ಸಣ್ಣ ಸೂಕ್ಷ್ಮನಯವನರಿತು ಕೆತ್ತಿ ಕುಸುರಿಸಿ

ಸಿಂಗರಿಸಿದ ದೇಗುಲವಿಕೆ;
ಮೂರ್ತಿಯಂತೆ ಪೂರ್ತಿಯಾಯಿ-
ತೊಂದೊಂದೂ ಸುಳುವಿನಲ್ಲಿ ಚೆಲುವು ಪಸರಿಸಿ.

ವಿಶ್ವಕರ್ಮ ರಚಿಸಿದೆಲ್ಲ
ಕೃತಿಯರಿವುದು ಕವಿಧರ್ಮವು.
ನಿಂದಿರೋಣ ನೂರು ಕಡೆಗೆ ದಿಟ್ಟ ನೀಡಿಯೂ.
ಮಹಾದ್ವಾರಕಿಹ ತೋರಣ,
ರೋದೋಂಗಣದೊಂದೋರಣ:
ಅಡಿಯಿಡೋಣ ಮೆಲ್ಲಮೆಲ್ಲನೆಲ್ಲ ನೋಡಿಯೂ.

ಮೂರ್ತಿಯೆದುರು ನರ್ತಿಸಲ್ಕೆ
ಅವಸರವೇ? ತವಕವೇಕೆ?
ದೇಗುಲದೀ ಚೆಲುವ ಗಣಿಸದಿಂತು ನಡೆವರೆ?
ಮೂರ್ತಿಯೊಂದೆ ದರ್ಶನಾರ್ಹ-
ವೆನುವ ವಿದರು,— ವಿಶ್ವಕರ್ಮ
ಗುಡಿಯನೇಕೆ ಸಿಂಗರಿಸಿದನಿಂತು? ನುಡಿವರೆ?

ರೂಪವೊಂದೆ ನಿನ್ನ ಕಣ್ಣ-
ಪ್ರೀತಿಯೆನಲು ನುಡಿವೆ ನೀನು,—
ರೂಪಣವೇ ಮುಖ್ಯ. ರೂಪವಿಲ್ಲದರ್ಥವು
ವ್ಯರ್ಥವಹುದು. ಕಲೆಯ ಸಾರ್ಥ-
ಕತೆಯು ರೂಪದೆಸಕದಲ್ಲಿ.
ರೂಪವೆ ಅಮರತೆಯ ದಾರಿ; ಪರಮಾರ್ಥವು.

ಬೇಕು ಚಿತ್ರ-ಸಂಗೀತ-
ವೆನಲದೇಕೆ ವಿಪರೀತ?
ಚಿತ್ರಗಾನವಿರದ ಕೃತಿಯು ವಿಕೃತಿಯಲ್ಲವೆ?

ಕಾವ್ಯಕಿರುವಮೋಟು, ನೋಟ;
ಗಾನದ ಜೊತೆಗರ್ಥದಾಟ:
ಗುಣತ್ರಯಗಳ ಮಿಲನವಿದರ ಪ್ರಕೃತಿಯಲ್ಲವೆ?

ದೂರದಿಂದ ನುಣ್ದನಿಯದು
ಮೆಲುಗಾಳಿಯನೇರಿ ಬಂದು
ಮೆಲ್ಲನೆಮ್ಮ ಹೃದಯವನ್ನೆ ಸೆಳೆಯುವಂತೆಯೆ,
ಸಂಗೀತವನೇರಿ ಬಹುದು
ಕವಿಯು ಪಡೆವ ಸುಭಗಶ್ರುತಿಯು,—
ಅರುಣರಥವನೇರಿ ಸೂರ್ಯ ಹೊಳೆಯುವಂತೆಯೆ.

ವಾಙ್ಮಿ, ಶಿಲ್ಪಿ, ರಸಿಕ, ಕವಿಯು
ಚೆಲುವದೊಂದನುಂಡು ಕಂಡು
ಕೃತಿಯುಲದರ ಬಣ್ಣವೆಲ್ಲ ಹೊಳೆಯುವಾಸೆಗೆ
ಸೋತು ಬರೆವರೊಂದು ಕೂದ-
ಲೆಳೆಯು ಕೊಂಕದಂತೆ ಚೆಲುವ:
ಕುಂಚಕೇನು ಕೇಡಿಂತಿರೆ? ಬರವೆ ಭಾಷೆಗೆ?

ಅರೋಚಕಿಯೆ ಬಾಳಿನಲ್ಲಿ?
ರೋಚಕಿಯಿರಲಾವ ಪುಣ್ಯ?
ಇದ್ದ ರುಚಿಯ ಶುಚಿಯನು ಕವಿ ಕಾಯಲೆಳಸಲು
ದೋಷವೆಲ್ಲಿ? ಸಿದ್ಧನಿರಲು
ಸೌಂದರಾಭಿರುಚಿಯು ಕೇಳ್ದ
ಕ್ರಯವನಿತ್ತು, ಮನದಾಸೆಯ ಪೂರ್ತಿಗೊಳಿಸಲು?

ತಿನ್ನಲು ಕೂಳಿರದ ದೇಶ;
ಎಲ್ಲ ದುಃಖದಮರಕೋಶ-
ವೆಮ್ಮ ನಾಡದಿಲ್ಲೇತಕೆ ಚೆಲ್ವುಪಾಸನೆ?

ನಾಡಿನ ಬರ ಹಿಂಗುವನಕ
ನಿರ್ಗತಿಕರು ತಂಗುವನಕ
ಸುಳಿಯದಿರಲಿ ನಮ್ಮ ಮನದೊಳಿಂಥ ವಾಸನೆ:

ಎಂದೊರೆಯುತ ಜನತೆಗಿತ್ತೆ
ನಾಡ ಸಂಪದಾಭ್ಯುದಯವ
ಕುರಿತು ನಿನ್ನ ಹಂಚಿಕೆಗಳ ಮಾಲೆಯೊಂದನು.
ಅರ್ಥಶಾಸ್ತ್ರವಿಶಾರದನ್ನು—
ನಾಡನೊಡ್ಡಿ ಹಾಡನಡ್ಡ-
ಗಟ್ಟುವರಿಗೆ ತೆರೆಯಬಲ್ಲೆ ಶಾಲೆಯೊಂದನು !

ಬಾಳ ತುದುಲ ಬಲ್ಲೆ ನೀನು.
ಅಲ್ಲೆ ಬೆಳೆದೆ ಕೆಸರಿನಲ್ಲಿ
ಸೌಂದರ್ಯದ ಮಹಾಲಕ್ಷ್ಮಿ ನಿನ್ನ ಹೃದಯದಿ
ಪವಡಿಸಿರಲು; ಹಾಡಿಗೊಂದು
ಕಂಣನಿತ್ತೆ ನಾಡಿಗೊಂದು:
ಜನತೆಯಿದನು ತಿಳಿಯಬಹುದು ನಾಡಿನುದಯದಿ.

ಒಂದು ಮರದ ನೆಳಲಿನಲ್ಲಿ
ಬೆಳೆದೆಯೆಂಬ ನುಡಿಗೆ ನಕ್ಕು
ಪರರನುಪಮೆಯಿಂದ ಕೊಲುವ ಬಗೆಯಿದೆನುತಿಹೆ.
ಮರವಲ್ಲವು ನರನು; ತಾನೆ
ತನ್ನ ನೆಳಲು—ಬೆಳಕ ಕಾಂಬ.
ಹಿರಿಯರನಾದರಿಸಲೆಲ್ಲಿ ದೋಷವೆನುತಿಹೆ.

ತಾರತಮ್ಯದಾಗರವೆನ್ನೆ—
ನೋಡು ನಾಡು ರಮ್ಯವಲ್ಲೆ ?
ಎಲ್ಲ ತರಗಳೆಲ್ಲ ನಯದ ಕಲೆಯದಿಲ್ಲಿದೆ :

ನುಡಿವೆ ನೀನು: ನೆಲದ್ಸೈಸಿರಿ,
ಯಂತ್ರವಿದ್ಯೆ, ಕೈಗಾರಿಕೆ,—
ನಾಡ ನಿಧಿಯ ನೆಲೆಯೆ ನಮ್ಮ ಸೀಮೆಯಲ್ಲಿದೆ.

ಕಹಿನುಡಿಗಳನಿಂತು ನೀನು
ಪಡಿನುಡಿಯುತ ವಿನಯದಿಂದ
ದಾರಿ ತಪ್ಪಿ ಮೇರೆದಪ್ಪಿತೊಂದು ಹೆಜ್ಜೆಯ
ತಪ್ಪಿತಸ್ಥನಂತೆ ತುಳಿದು
ಬಾಳಲಿಲ್ಲ ಬದುಕಲಿಲ್ಲ:
ಸಾರ್ಥಕತೆಯಿದಿಂತು ನೀನು ಪಡೆದ ಬಿಜ್ಜೆಯ.

೩

ಒಮ್ಮೆ ಮನೆಯ ತೋಟದಲ್ಲಿ
ತುಂಬುಗುಲಾಬಿಗಳರಳುತ
ಗಮಗಮಿಸಲದೇಕೊ ನಿನ್ನ ಬಗೆಯು ಮುದುಡಿತು.
ಹೂವ ತುಂಬಿದಂಥ ತುಂಬು
ನಿನ್ನ ಬಾಳನೆಂದು ತುಂಬಿ
ಬರುವದೆಂಬ ಚಿಂತೆ ನಿನ್ನ ಬಗೆಯ ಕದಡಿತು.

ಊರಿಗೆದ್ದ ನನ್ನ ತಡೆದು
ತೋಟಕೊಯ್ದು ತಿಂಗಳಲ್ಲಿ
ಕಂಗಳರಳಲಂಗ್ಯೆಗಳ ನಡುವೆ ತೀಡುತ
ಒಂದನು ಮತ್ತೊಂದನೆತ್ತಿ
ತೋರಿಸಿದ್ದೆ ಹೂವಿಗಿದ್ದ
ಪೂರಣ ನಿನಗಿಲ್ಲವೆಂಬ ಭಾವ ಮೂಡುತ.

ಗೆಳೆಯ! ಕೇಳು ನಿನ್ನ ಕೊರತೆ
ದಿವ್ಯ ಕಾವ್ಯರಚನೆಯೊರತೆ.
ಮಣ್ಣು ಮಾತ್ರ ಹೂವಿನಲ್ಲಿ ಕಣ್ಣುವಡೆಯಿತು.

ಮುಂದದೊಂದು ದಿನಕೆ ಪೂರ್ಣ-
ವಾಗಲಿರುವ ನಿನ್ನ ಜೀವ
ಕಂಪಿಡುತಿಹ ಕಾವ್ಯದಲ್ಲಿ ಬಣ್ಣವಡೆಯಿತು.

ನೀನು ಮೂಡಿಸಿದ್ದ ಮುಗುಳು
ನೀನು ಹಾಡಿಸಿದ್ದ ಬೆಳಗು
ನೆಲದ ಮೂಡು ಮುಳುಗಿನಂತೆ ಕೊನೆಗು ಬಾಳ್ವವು.
ನೀನು ಪಾದ ಪೂಜೆ ಗೆಯ್ದ
ನೇಹ, ನಲುಮೆ, ಭಕ್ತಿ, ಶ್ರದ್ಧೆ,
ನಿರ್ವಂಚಿತ ಬುದ್ಧಿ ನಾಡಿನೆದೆಯನಾಳ್ವವು.

ನಿನ್ನ ಧೀರ ಲಲಿತವಾಣಿ
ಬೀರ ಕಡಗವನ್ನು ನಾಡ
ಕೈಗೆ ತೊಡಿಸುತಭಯವೊರೆದು ನಿತ್ಯ ನಲಿವಳು ;
ದಿನಕದೊಂದು ಹೊಸಪ್ರಪಂಚ ;
ಇಂದಿನ ಸಿರಿ ನಾಳೆ ಸಂಚ-
ವೆಂದು ಚೆಲುವಿಗಿಹ ಚಿರಂತನತೆಯನುಲಿವಳು.

ಒಂದು ತರಂಗಿಣಿಯ ತಡಿಗೆ
ಮತ್ತದೊಂದು ಗುಡಿಯ ಬಳಿಗೆ
ನಿಂತ ಮಾಮರಗಳ ತೋಪಿನಲ್ಲಿ ಗಾಳಿಯು
ತಂಬೆಲರಿನ ಮೃದು ನಾದವ
ಪ್ರಲಯಾನಿಲದಾಮೋದವ
ಗೆಯ್ವ ತೆರದಿ ಗೀತಿಸುವದು ಪದಗಳೋಳಿಯು.

ಬಾಳಿನ ಕಿಲ್ಮಿಷವೆಲ್ಲವ,
ಕುರೂಪವನು ತೊಡೆದು ಹಾಕು-
ತಂಗಾಂಗದ ಸೌಂದರವದು ಹೊರಸೂಸುವದೆಂದೋ

ಒಳಹೊರಗನು ಮೈಮನವನು
ಮನೆಮಠವನು ಚೇತನವನು
ಬೆಳಗಿಸಿ ಬೆಳಕಿನ ಹಾಸಿಗೆಯನು ಹಾಸುವನೆಂಬೋ.

ಅಂದಿಗೆ ತುಂಬುತ ತುಳುಕುತ
ನಿನ್ನೀ ಜೀವದ ತುಂಬಿಯು
ಗೆಯ್ಯುವ ಗಾನವದಿಂದೇ ತುಂಬಿಹುದೀ ಕಿವಿಯು.
ಇಂದಿಗು ಕಣ್ಣೆವೆಯಿಕ್ಕದೆ
ಅನಿಮಿಷನಂತೆಯೆ ನಿಂತೆನು
ಆ ದಿನ ಕಾಣುವದೆನ್ನುತ ನಿನ್ನೊಳು ಬಹ ಕವಿಯು.

ಹೃತ್ತಲ್ಪದಿ ನಿದ್ರೆಯಲಿಹ
ಸೌಂದರ ಲಕ್ಷ್ಮಿಯು ನಿನ್ನೊಳ-
ಗಿಂದಿಳಿಯುತ ಕಣ್ಣೆದುರಿಗೆ ನಿಲ್ಲಲು ರಾಜಿಸಲು
ನೀ ನೋಡುವೆ ಮೊದಮೊದಲಿಗೆ
ಮದರಂಗಿಸಿದೆಳೆಯುಗುರನು,
ಕೆಂಬೆರಳನು, ಪದಪದ್ಮವ; ದೇಹವ ಮಾಜಿಸಲು

ಚಿಕ್ಕೆಗಸೂತಿಯ ಸೀರೆಯು,
ಕಂಣೆತ್ತುವೆ ಮುಖಚಂದ್ರಮ-
ನನು ನೋಡುತ, ತಣಿದಿಹ ಜೀವವನರ್ಪಿಸಲೆಂದು;
ಎತ್ತಲು ಮಾದೇವಿಯು ತ-
ನ್ನಭಯಕರಂಗಳನೆತ್ತಲು
ಮೈದಡವಲು, ಮೈಮನವನು ಸಂತರ್ಪಿಸಲೆಂದು.

ಅಂದಿನ ದಿನ ನೀನೊರೆವುದು
ಸಿಡಿಲು ಮಂತ್ರಿಸಿರುವ ವಾಣಿ;
ಮಿಂಚಿನ ದೀಪದ, ಮೊಳಗಿನ ಗಂಟೆಯ ಮೇಳದಲಿ;

ಅಂದಿನ ದಿನ ನೀ ಮಿಡಿವುದು
ಚೆಲುವೆ ಮೋಹಿಸಿರುವ ವೀಣೆ
ದೇವಕನ್ನೆಯರ ಮೃದಂಗಮಂಗಲ ತಾಳದಲಿ.

---

## ೬. ಸಾಹಿತ್ಯಾಚಾರ್ಯ   

ಉನ್ನತಾದ್ರಿಶೃಂಗಶಿಲೆಗೆ,—
ಜ್ಯುಪಿತರೇಂದ್ರ ಬಿಗಿದನಿಳೆಗೆ,
ಪಾವಕವನು ಪ್ರಮಥ ತಂದ-
ನೆಂಬ ಮುಳಿಸಿನಿಂದ ಬಂಧ-
ನದಲಿ ನುಗಿಸುತಾಧೀರನ,
ಅಗ್ನಿರಹಿತೋದ್ಧಾರನ.
ಕೊಳೆಯುತಿರುವೆ ಸೆರೆಯಲಿ ;
ಪ್ರೇಮ ನಿನ್ನ ಪೊರೆಯಲಿ.

ಗರುಡನಂಥ ಮಹಾಚಿಂತೆ-
ಗಿರೆ ವಿದೀರ್ಣ ಹೃದಯವಂತೆ
ಗೊಮ್ಮಟನಂತಳುಕದೆ
ಶೋಕ ತುಂಬಿ, ತುಳುಕದೆ
ನಿಂತೆ ನೀನಜೇಯನಾಗಿ
ಅಮರವಜ್ರಕಾಯನಾಗಿ ;
ಅನ್ನವಿರಲು ಮರುತರುಸಿರು,
ವರುಣ ತಂದ ಮಳೆಯು,—ನೀರು.

ಬನ್ನ ಬಡುವ ನಿನ್ನ ಕಂಡು
ಹಗಲಿರುಳೂ ಕಟ್ಟಿಕೊಂಡು
ಬಗೆಗಾಣದ ಬಯಲಿನಲ್ಲಿ
ಶೂನ್ಯದಾ ಸ್ಮಶಾನದಲ್ಲಿ
ಸುತ್ತುತಿಹಳು ಬೊಗರೆಯಂತೆ ;

ಬೆದರಿ ನೋಡಿ ಚಿಗರೆಯಂತೆ;
ಕಣ್ಣುಬಿಡುವ ತಾರೆಗಳಿಗೆ
ಕರುಣೆ ಪಡುವ ಗ್ರಹಂಗಳಿಗೆ
ಮೊರೆಯಿಡುವಳು ಧಾರಿಣಿ,—
ಆ ತ್ರಿಲೋಕತಾರಿಣಿ:

ಇಂತು ತೊಳಲ್ವ ಪ್ರಮಥಗಾವ-
ಸುಖವು ಹೇಳು? ಕಾವನಾವ?
ಇಳೆಯು ತೋರ್ವ ಚೆಲ್ವ ಬಣ್ಣ
ತಂಪುವಡಿಸುತಿಹುದು ಕಣ್ಣ.
ಜ್ಯುಪಿತರೇಂದ್ರನನ್ನಳುಕಿಸಿ
ವಜ್ರಾಯುಧಗಳನಣಕಿಸಿ
ಕುಂದದಿರುವ ನಂದದಿರುವ
ರಾಜತೇಜ, ಬಲ, ಗೌರವ-
ದಿಂದ ತುಂಬಿ ಮೆರೆವ ಮುಖ,—
ಇದುವೆ ದುಃಖದಲ್ಲು ಸುಖ!

ಸೌದಾಮಿನಿಯಂತೆ, ದೀಪ್ತ
ಲೋಕಾಲೋಕದಲಿ ವ್ಯಾಪ್ತ-
ವಾದೊಲವಿನ ಭರವಸೆ
ಕುಗ್ಗಿದೆದೆಯ ತುಂಬಿಸೆ,
ಲೋಕಕೆ ಸುಖ-ಸ್ವಾತಂತ್ರ್ಯ
ವೈಷಮ್ಯಕೆ ಪಾರತಂತ್ರ್ಯ
ಬರುವ ದಿವ್ಯ ಸಂಜ್ಞೆಯಿರೆ
ನೆಲ-ಮುಗಿಲಿದ ಸಾರುತಿರೆ
ಸ್ವರ್ಣಯುಗದ ಕಹಳೆಯೂದಿ
ದ್ವೇಷ-ದೂಷಣೆಗಳ ಬೂದಿ

ದಿಕ್ಕು ದಿಕ್ಕಿನಲ್ಲಿ ಚೆಲ್ಲಿ
ಪ್ರೇಮವು ಹೊಂದೇರಿನಲ್ಲಿ
ಬರುವ ತನಕ,— ಯಾವ ಸುಖ?
ಪೂರ್ವ ಸಂಜ್ಞೆಯೊಂದೆ ಸುಖ.
ಇಂದಿದೇ ವಿಮೋಚನೆ.
ಇದಕೆ ಬೇಡ ಯೋಚನೆ.

ಕೆಳೆಯೆಂಬುವ ಮಹಾಮಂತ್ರ-
ವಿರೆ ಸ್ವತಂತ್ರ, ಸರ್ವತಂತ್ರ,
ಎದೆ ಬೀಣೆಯ ನುಡಿಯಿಸೆ,
ಮನದ ಕೊಂಬ ಹಿಡಿಯಿಸೆ,—
ಅದರ ನಾದದಲ್ಲಿ ಕೂಡಿ
ಬೆಳೆಯಿತೆಮ್ಮ ಗಣವು ಹಾಡಿ.
ಕೂರಲಗದು ನಿನ್ನ ಬುದ್ಧಿ;
ನಮ್ಮ ಬಾಳಿನಲಿ ಸಮೃದ್ಧಿ-
ಯನು ತಂದಿತು. ನಿನ್ನ ಹೃದಯ
ಸಾಹಿತ್ಯದಲರುಣೋದಯ-
ವಾಗಿ ಬೆಳಕು ಬೀರುತಿಹುದು.
ಹೊಸ ಯುಗವನು ಸಾರುತಿಹುದು.
ಕಾವ್ಯ ಮತ್ತೆ ರಾಷ್ಟ್ರಕಾರ್ಯ-
ಗಳ ಸಂಗಮದೌದಾರ್ಯ
ನಿನ್ನೊಳು ನೆಲೆಯಾಗಿ ನಿಂತು
ನಾಡಿಗೆ ನೆರೆಯಾಗಿ ಬಂತು;
ಪ್ರೇಯ-ಶ್ರೇಯವಿಂತು ಕೂಡಿ
ಬಾನಂಗಳದಲ್ಲಿ ಮೂಡಿ.

## ೭. ಸಾತ್ವಿಕ

೧

ಮೊದಲಿನಿಂದ ನಿನ್ನ ಬಾಳ
ಹೊಂಚನೆಲ್ಲ ಹಂಚುಗೊಳಿಸ-
ಲೆಂದು ವಿಧಿಯು ಮಾಡಿದಂಥ ಸಂಚು ಕೊನೆಯಿತು.
ನೀನು ವಿಧಿಯ ಕೂರಲಗಿನ
ಗುರಿ ತಪ್ಪಿಸಲೆಂದು ಸರಿಯೆ
ಸಾಣೆ ಹಿಡಿದ ತೆರದಿ ಮತ್ತೆ ಮಸೆದು ಮೊನೆಯಿತು.

ಹುಟ್ಟಿದೊಡನೆ ಸಿರಿವಂತಿಕೆ
ಬಂದು ನಿನಗೆ ಕೊಡೆ ಹಿಡಿಯಿತು;
ವಿಧಿಯು ನಿನ್ನ, ತಿರುಕನಂತೆ ತಿರುಗಹಚ್ಚಿತು.
ದೇವನಿತ್ತನದ್ಭುತತಮ
ಪ್ರತಿಭೆಯನ್ನು ಕಾಣ್ಕೆಯೆಂದು;
ದೈವವದರ ಹಿರಿಯ ತೇಜವನ್ನು ಮುಚ್ಚಿತು.

ಹುಟ್ಟು ರಸಿಕ ನೀನು; ಜನ್ಮ-
ಸಿದ್ಧ ಕಲೆಯು ನಿನ್ನದಯ್ಯ;
ದೇವಗರ್ಭವನ್ನು ಕಾಂಬ ನೇತ್ರ ನಿನ್ನದು.
ಭೂಗರ್ಭವ ತಿಳಿಯಲೆಂದು
ಶ್ವೇತ ದೀಪಕಿರಿ ಪ್ರೇಷಿತ,
ದೊರೆತ ಕಂಣ ಕಳೆದುಕೊಳುವ ಪಾತ್ರ ನಿನ್ನದು.

ತೆರೆಮರೆಯನು ಸುರುಳಿ ಸುತ್ತಿ
ವೇಷಭೂಷಣಗಳನೊಗೆದು
ಪಾತ್ರವಲ್ಲ ಕ್ಷೇತ್ರವಾಗಿ ನೀನು ರಮಿಸಿದೆ;

ರಂಗ-ಭೂಮಿಗಳನು ಕಂಡು
ನಾಟಕಗೃಹಗಳನು ಹೊಕ್ಕು
ಕಂಗೆಡಿಸುವ ಜೀವಕ್ಷುಧೆಯನಲ್ಲಿ ಶಮಿಸಿದೆ.

ನೆಲದೊಳಗನು ಬಲ್ಲ ನಿನ್ನ
ತಿಳಿವಿಗಿತ್ತು ಸಂಬಳವ-
ನ್ನೆಲ್ಲರಂತೆ ನೀನು ಬಾಳ್ವುದೆಂದು ನುಡಿದರು;
ಅಂತೆ ಕೆಲವು ದಿನಗಳಿದ್ದು
ಬೇಸರಾಗುತೆಲ್ಲರಂತೆ
ನಾನೆಲ್ಲಿಹೆನೆನ್ನಲೊಡನೆ ದೂರ ಸಿಡಿದರು.

ಒಸೆದು ನಿಂತ ಸಂಸಾರವು
ವಿರಸವಿರಲ್ಕು! ವಿಕೃತವಿರಲು
ಮನೆಯಾಸರ, ಜಗವು ಕೇಳ್ವ ಹಿಡಿತ ದುಡಿತವು
ಬೇಸರಿರಲು, ಪೂರ್ಣವಿರಲು
ನಂಬು ನನ್ನನೆಂದು ನಿತ್ಯ
ಹೃದಯದಾಳದಲ್ಲದೊಂದು ದನಿಯ ಮಿಡಿತವು.

ನಿಂತೆ ನೀ ಸ್ಮಶಾನರುದ್ರ-
ನಂತೆ ಮಾಯೆಗಳನು ಬಿಸುಟು
ನಿನ್ನ ಬಾಳ ಸುಖ-ದುಃಖವ ಬೂದಿಯಾಗಿಸಿ;
ನಿನ್ನ ಮನವನಿಳೆಯ ರುದ್ರ-
ಭದ್ರತೆಗಳು ಸೂಕ್ಷ್ಮತೆಗಳು
ಹಿತಾಹಿತಗಳೆಲ್ಲವಲೆವ ಬೀದಿಯಾಗಿಸಿ.

ಕೈಯುಲೊಂದು ಸಿಗರೇಟು;
ಹುಳಿ ಮಜ್ಜಿಗೆ ಕುಡಿಯಲೆಂದು;
ಕಲಿದ ಗೆಳೆಯರೆಡೆಯಲನ್ನ-ಪಾನ-ನಿದ್ರೆಯು;

ಎಲ್ಲ ವಿಭವವೆಲ್ಲೈಸಿರಿ
ದೇಹದ ಚೆಲುವಿಕೆ ನಿಲುವಿಕೆ
ಕೊನೆಗೆ ಬೂದಿಯೆಂಬ ಭಾವವಿದ್ದ ಮುದ್ರೆಯು:

ಇಂತು ಬಾಳ ರಂಗದಲ್ಲಿ
ಬಾಳುವೆ ಸನ್ಯಾಸಿಯಾಗಿ
ಮೈಯುಂಡಿಹ ಚಟಗಳನ್ನು ಮೈಗೆ ಸಲ್ಲಿಸಿ ;
ಚಿತ್ರವನ್ನು ಮಾತ್ರ ದಿವ್ಯ-
ಚಕ್ಷು ತೋರ್ದ ಭೂಲೋಕದ
ಹೃದಯದಾಳವಾದ ಸೀಮೆಯಲ್ಲಿ ನಿಲ್ಲಿಸಿ.

೨

ಜಗದ ರೀತಿ-ನೀತಿಗಳನು
ಬಲ್ಲ ನೀನು ವ್ಯವಹಾರಗ-
ಳೋನಾಮವ ತಿಳಿಯದಾದೆ ನಿಃಸಹಾಯನು
ನಿನ್ನ ಕೈಯ್ಯಲಿತ್ತ ಹಣವ-
ಕಣವೆ ಇರಲಿ ಮಣವೆ ಇರಲಿ—
ನಿಮಿಷಾರ್ಧದಿ ಕಳೆವುದರಲಿ ನೀನಜೇಯನು.

ಆಸೇತುಹಿಮಾಚಲವು
ಧೂರ್ತನೊಬ್ಬ ನಿನ್ನ ತನ್ನ
ಕೋಡಂಗಿಯನಾಗಿಸುತ್ತ ದುಡ್ಡು ಗಳಿಸುತ
ಬಂಗಾಲದಿ ಕೈ ಬಿಟ್ಟನು
ಕಂಗಾಲಾಗಿಸಿ ನಿನ್ನನು
ಹುಚ್ಚು ಮಂಗನಂತೆ ತಿರುಗಿ ಮನೆಗೆ ಕಳಿಸುತ.

ಹಗಲು-ರಾತ್ರಿಯೆಲ್ಲವೊಂದೆ.
ನಿಯಮವೆಂಬುದಿಲ್ಲ ನಿನಗೆ.
ನಿಯತಿ ಕಾಡಿಕೆಂದು ನಿಯಮಗಳನು ಮೀರಿದೆ.

ವಜ್ರಿಗೆ ಸಹ ಮಣಿಯದಂಥ
ವಜ್ರದೇಹವಿದು ನಿನ್ನದು
ನಿನ್ನ ನಿರಂಕುಶತೆಯೆದುರು ಕೈಯ್ಯನೂರಿದೆ.

ನೀ ವಿನೋದದಾಗರವು;
ಕೆಲವು ಹಳೆಯ ಬಿನದಗಳನು
ಮತ್ತೆ ಮತ್ತೆ ಬೇಸರಾಗುವಂತೆ ನುಡಿಯುವೆ;
ನಕ್ಷತ್ರದ ಜ್ಯೋತಿಮಾಲೆ
ನಿನ್ನ ಕೃತಿಗಳೊಂದು ಕಲನ ;
ಇದನು ಬಿಟ್ಟು ಬರಿಯ ಕಡ್ಡಿ ಕೊರೆದು ಹಿಡಿಯುವೆ.

ಎಲ್ಲ ವಿಧದ ಬಾಳಿನಾಳ-
ವನ್ನು ಬಲ್ಲೆ. ಒಂದೆ ಬಗೆಯ
ಕಬ್ಬವೆಂತೊ ಏನೊ ನಿನ್ನ ಮನವ ಹಿಡಿಯಿತು.
ನಿನ್ನ ಬಾಳ ವಿಮರ್ಶನವ-
ಗಾಧವತಿ ವಿಶಾಲವಹುದು.
ಮುದುಡಿಕೊಂಡೆ ಕಾವ್ಯವಿಮರ್ಶನವು ನಡೆಯಿತು.

ನಾಡಿನೆಲ್ಲ ಮೂಲೆಗಳನು
ಬೆಳಕಿನಿಂದ ತುಂಬಬಲ್ಲೆ ;
ನೀನೆ ಮೂಲೆಗುಂಪಾಗುತ ಬಿದ್ದುಕೊಂಡಿಹೆ;
ನಿನ್ನನೆತ್ತಿ ಹಿಡಿಯ ಬಂದ
ಸಖರು ಕುಸಿದರಯ್ಯ ನೆಲಕೆ;
ಯಾವ ಕೈಗು ನೀಗದ ಪಾರಜದ ಚಂದಿಹೆ.

ಜೋಗದ ಜಲಪಾತ ನೀನು;
ನಿನ್ನನಂತ ವಿದ್ಯುತ್ತು
ನಾಡದಿನಿಸು ಬಳಸದಂತೆ ಕಳೆಯುತಿರುವದು ;

ನಿನ್ನ ಕಲಾಕೃತಿಗಳಲ್ಲಿ
ವಿದ್ಯುಲ್ಲತೆಯಂತೆ ತೂಗಿ
ಆಗದೊಮ್ಮೆ ಈಗಿದೊಮ್ಮೆ ಹೊಳೆಯುತಿರುವದು.

ಕುಳಿತಲ್ಲಿಯೆ ಕುಳಿತು ಬಿಟ್ಟೆ;
ನಿಂತಲ್ಲಿಯೆ ನಿಂತು ಬಿಟ್ಟೆ;
ಕಾಲನಾಧಿಪತ್ಯವನ್ನೆ ಅಲ್ಲಗಳೆದಿಹೆ.
ಧರಾಚಕ್ರದಲ್ಲಿ ಸಿಲುಕಿ,
ನರನ ಪಾಡು ನಿನ್ನದೆಂಬು-
ದನ್ನು ಮರೆತು ಬಿಟ್ಟ ತೆರದಿ ಬಾಳ ಕಳೆದಿಹೆ.

೩

ಇಂತು ನಿನ್ನ ಬಾಳ್ವೆಯಿರಲು
ಬಿಸುಟೊಗೆದಿಹ ಬಾಳೆಯೆಲೆಯು,—
ಮೂಲೆಯಲ್ಲಿ ಬಿದ್ದುಕೊಂಡು ಜಗವನೀಕ್ಷಿಸಿ
ಸಾಕ್ಷಿಯಾಗುತಿದನೆಲ್ಲವ
ನೋಡಿಕೊಂಡು ತೆರಳ್ವುದೆಂದೆ,
ಸಾಕ್ಷಾತ್ಕೃತವಿಹುದನೊಂದೆ ಅನುಲಕ್ಷಿಸಿ.

ಧರೆಯ ನ್ಯಾಯಸ್ಥಾನದಲ್ಲಿ,
ಸಾಕ್ಷಿಯಾಗಿ ಕಂಡುದನ್ನು
ಸಾಕ್ಷಿಗಾರನಾಗುತಂಜದಳುಕದೊರೆಯು—
ಜನಕೆ ನಿನ್ನ ನೋಡಿಕೊಳ್ಳ-
ಲದುವೆ ನಿನ್ನ ಛತ್ರಿಯೆನುವೆ;
ಇಲ್ಲದಿರಲು ಸಾಕ್ಷಿ ಕಷ್ಟವೆಂದು ತಿಳಿಯುವೆ.

ನೀನು ಕಟ್ಟಿದಂಥ ನಾಟಕವನು
ದೃಶ್ಯಕಾವ್ಯಕಲಾಭವನ-
ವಾತ್ಮಪುರುಷ ತಾನೆ ನಿರ್ಮಿಸಿರುವ ಸೃಷ್ಟಿಯು;

ರಾಗಿಣಿಯರ ಜಕ್ಕಿಣಿಯರ
ಸರಸಿ ಜಕ್ಕಣಾರ್ಯನಂತೆ
ಕ್ಷಣದಿ ಸೃಜಿಸಿ ನಿಂತನಾತ್ಮಪರಮೇಷ್ಠಿಯು.

ಕನ್ನಡಿ ಪಡಿಗನ್ನಡಿಗಳ
ಮಂತ್ರಕಲೆಯು ನಿನ್ನದಯ್ಯ.
ಬುದ್ಧಿ ಹೃದಯ ಬಿಂಬಿಸಿಹುದನಾತ್ಮ ಬಿಂಬಿಸಿ
ತನ್ನ ಕಿರಣಗಳನೊಗೆಯಲು
ಮನದ ಕಾಂಡಪಟದ ಮೇಲೆ,—
ಒಗೆತಂದವು ರೂಪು ವಾಣಿ ಜಗವ ತುಂಬಿಸಿ.

ಮಹಾದ್ಭುತವಿದೆನಲು ಪ್ರತಿಭೆ-
ಯುಸದೃಶ ಜ್ಯೋತಿಯಲಿನಾಂದು,
ನಿನ್ನ ಪಾತ್ರದುಸಿರೆ ಮಂತ್ರ; ರೂಪು ದರ್ಶನ;
ಕಥಾನಿಯಂತ್ರಣದ ತಂತ್ರ
ದೇವ ಸೃಷ್ಟಿಯಂತೆ ಪೂರ್ಣ;
ಅಂತೆ ನಿನ್ನ ಕಲೆಯ ಮಾಟ ದಿವ್ಯಸ್ಪರ್ಶನ.

ಒಮ್ಮೆ ನೀನು ಪುರಾತನರ
ಬಾಳಿನೊಗಟವನ್ನು ಬಿಡಿಸ-
ಲೆಂದು ಪುಣ್ಯಕಥೆಗಳೊಳಗನೊರೆದು ನೋಡಲು
ರಘುವಂಶಲಲಾಮರೆಲ್ಲ
ಸೋಮಕುಲದ ಸೋಮರೆಲ್ಲ
ಮತ್ತೆ ಯಾದವಾಗ್ರಣಿಯೂ ಬಂದರಾಡಲು,—

ನಿನ್ನ ಮನದ ರಂಗದಲ್ಲಿ;
ಅಂದಿನ ಬಾಳೆಲ್ಲ ಮರಳಿ
ಬಂತು ಮಹಾಪೂರವಾಗುಕೊಲವ ತುಂಬಿಸಿ;

ಎಂತು ನುಡಿದರಂತೆ ನುಡಿದೆ;
ಕಂಡಿಹುದನು ಕಂಡ ತೆರದಿ
ಕಡ್ಡಿಯಲುಗದಂತೆ ನಿಂತೆ ನೀನು ಬಿಂಬಿಸಿ.

ಒಂದು ದೃಶ್ಯದಲಿ ವಸಿಷ್ಠ-
ಋಷಿಯು ಮಾತನೊರೆವ ಸಮಯ
ಬರಲು ನಿನ್ನ ಹಗಲಿರುಳುಗಳದರ ನಾದದಿ
ಕಳೆದವಯ್ಯ; ಕಣ್ಣೆದುರಿಗೆ
ಬಂದು ನಿಂತನೀ ಮಹರ್ಷಿ;
ನುಡಿಯನೇತಕೆಂದು ತಿಂಗಳನು ವಿಷಾದದಿ

ಕಳೆಯೆ ನಿದ್ದೆಯೂಟವಿರದೆ
ಋಷಿಯು ನುಡಿದ ತುಟಿಯಲಗುತ.
ಧನ್ಯನೆಂದು ಪ್ರತಿಧ್ವನಿಸಿದೆ ನೀನು ತಣಿಯುತ.
ಆರ್ಷ ಸಿದ್ಧಿಯಿಂತು ನಿನ್ನ
ವಾಣಿಯಲ್ಲಿ ನೆಲಿಸಲಿರದೆ
ಲೋಕ ನಿನ್ನ ಘನತೆವೆತ್ತ ಕೃತಿಗೆ ಮಣಿಯುತ?

ಲೋಕದಾಳವಗಲವಿಂತು
ಕೈಯನೆಲ್ಲಿಯಾಗಿ ನಿನಗೆ
ಹಿಂದಿನಿಂದಿನೆಲ್ಲ ಬದುಕು ತೆರೆದು ತೋರಲು
ಅಂತರಂಗದದ್ಭುತಗಳ-
ನವನು ನೀನು ಬಣ್ಣಿಸಿದ್ದೆ
ಮುಂದೆ ಬರುವ ಬಾಳ ಗೊತ್ತುಗುರಿಯ ಸಾರಲು.

ಒಂದು ಚೆಲು ಗುಲಾಬಿ ಗಿಡವು
ಬೇರೆ ಹೂವು ಮೊಗ್ಗೆಯಿರದೆ
ಸುಮನವೊಂದರಲ್ಲೆ ತನ್ನ ರಕ್ತವಿರಿಸುತ

ಮೆರೆಯೆ, ಕಂಡು ನುಡಿದೆ ನೀನು :
ದೇವ ಬಲ್ಲ ತನ್ನ ಕೆಂಪು-
ನೆಲ್ಲಿ ತಂದಿತಿದು ನೆಲದಲಿ ಬೇರನಿಳಿಸುತ !

ದಾರಿಯಲ್ಲಿ ಹೋಗುತಿರಲು
ಮುದುಕನೊಬ್ಬ ಬಂದು ತಡೆಯೆ
ತನ್ನ ಮಹತಿ-ಗೌರವಗಳನೆಲ್ಲಗಳಹುತ
ಸಾದರದಿಂದಾಲಿಸಿದ್ದೆ ;
ಬೆರಗುಗೊಂಡ ನೇಹಿಗರನು
'ನಿತ್ಯ ದೊರೆವ ಮಾದರಿಯಿದು' ಎಂದು ತಿಳುಹುತ.

ಒಬ್ಬರೆನಲು 'ಅಹರ್ನಿಶಿಯು-
ಲಗ್ನಿಹೋತ್ರವಿಂತಿದೇನು ?'
ನುಡಿದೆ ನೀನು : 'ನಮ್ಮ ನಿಮ್ಮದೊಂದೆ ಗೋತ್ರವು.
ನಿಮ್ಮ ಜರದ ವೇಷ್ಟಿ ಬೂದಿ.
ನನ್ನಯ ಸಿಗರೇಟು ಬೂದಿ.
ನನ್ನ-ನಿಮ್ಮ ದೇಹಕಿರುವದೊಂದೆ ಕ್ಷೇತ್ರವು.'

ಭರತ ತಾಯ ಕಾಣಲೆಂದು
ಬರುವ ದೃಶ್ಯಕಾಗಿ ನೀನು
ದಾರಿ ಕಾಯುತಿದ್ದೆ ತಿಂಗಳೆರಡು ತಿಂಗಳು.
ಒಮ್ಮೆ ನಾವು ಮಾತನಾಡು-
ತಿರಲು ಥೊಂಕನೆದ್ದು ನೀನು
ರಜನಿಯಲ್ಲದೇನೊ ಕಾಣುತರಳಿಕಂಗಳು,

ಕುಳಿತ ಕುರ್ಚೆಯಿಂದ ನನ್ನ-
ನೆಬ್ಬಿಸೆದುರಿಗಿರಿಸುತದನು
ದೃಶ್ಯವೆಲ್ಲವಭಿನಯಿಸಿದೆ ಕಂಡ ವಿಧದಲಿ.

ನೀರು ಸುರಿಯೆ ಕಂಗಳಿಂದ
ಭೂತಪ್ರೇತಗ್ರಸ್ತನಂತೆ
ಸಂವಾದವನೆಲ್ಲವೊರೆದೆ ಕೇಳ್ದ ವಿಧದಲಿ.

ಇಂತು ನಿಂತೆ ನೀ ತ್ರಿನೇತ್ರ,—
ಹಣೆಗಣ್ಣದು ನಿನ್ನ ಕಣ್ಣೆ-
ಗಿತ್ತ ಕಣಿಯೆ ಸಂಸಾರದ ಸಾರವೆನ್ನುತ;
ಇಂಥ ಕಣಿಯನಾತ್ಮ ಕಟ್ಟ-
ಲನುವು ದೊರೆಯಲೆಂದೆ ಜನವು
ಮತ್ತನಂತ ಕಾಲದಾ ಪ್ರತೀತಿಯೆನ್ನುತ.

೪

ಕನ್ನಾಡಿನ ರಂಗಭೂಮಿ-
ಯಲ್ಲಿ ಪುಣ್ಯಕಥೆ ಪುರಾಣ-
ಗಳ ಸುರಿಮಳೆ ಸ್ವಾತಿಯಂತೆ ಕೇಸರಿಟ್ಟಿತು.
ನಿನ್ನ ದೃಶ್ಯಗಳನು ನೋಡಿ,
ಹತ್ತಿಬಿಟ್ಟ ಹಿಡಿದು ಪುಣ್ಯ
ಕಥೆಯ ಕೇಳ್ವ ವಿಧವೆಯರಲಿವಲ್ಲಿ ಹುಟ್ಟಿತು.

ಕೆಂಪು ಸೀರೆಯಮಂಗಲವ
ನೊತ್ತಮೊದಲು ರಂಗಭೂಮಿ-
ಯಲ್ಲಿ ತಂದ ಮಂಗಳತೆಯು ನಿನ್ನ ಕಾಣಿಕೆ.
ಎಲ್ಲ ಜೀವಗಳನು ಮುಚ್ಚು
ಮರೆಯಿಲ್ಲದೆ ಬತ್ತಲಾಗಿ—
ಸುತ್ತ ತರುವೆನೆಂಬುದಹುದು ನಿನ್ನ ಹೂಣಿಕೆ.

ನೀನು ನಕ್ಕ ನಗೆಯು ಹೊಸತು;
ನಾಡೆ ಬೆಳ್ಳಿ ಕೇಳುತಿತ್ತು
ಮೃದು ಕೋಮಲ, ವಜ್ರಕಠಿಣವಾದ ಹಾಸ್ಯದ.

ರುದ್ರದೃಶ್ಯಗಳನು ಕೇಳಿ–
ದವರಿಂದರು ಶಬ್ದಸೃಷ್ಟಿ–
ಯಲ್ಲಿ ಕಾಣೆವಿದಕು ಹಿರಿಯ ಅಮಾವಾಸ್ಯವ.

ಸ್ಥಿತಪ್ರಜ್ಞನಾಗಿ ಬುವಿಯ
ಸುಖದುಃಖವ ಕಾಣುತಿರುವಿ–
ಯಂತೆ ಅದರ ತಳಬುಡಗಳನೆಲ್ಲವರಿತಿಹೆ.
ಲೋಕಪದ್ಧತಿಗಳನೊರೆದು
ನೋಡಿ ಸತ್ಯದೊರೆಗೆ, ಸತ್ಯ–
ದಾಭಾಸವ ತೆರೆದು ತೋರ್ವುದರಲಿ ನುರಿತಿಹೆ.

ಪಾಪಿಷ್ಠರ ಹೃದಯದಲ್ಲಿ
ಮೊಳೆವ ಪುಣ್ಯವನ್ನು ತೋರಿ
ಗುಣಿಗಳೆನಿಸುವವರ ದುರ್ಗುಣಗಳನೆಳೆಯುವೆ
ಜನತೆಯೆದುರು, ಧರ್ಮಗಳ–
ನ್ಯಾಯದೆಡೆಗೆ ಲೋಕಾಯತ–
ಕಿರುವ ನ್ಯಾಯದೆಡೆಗೆ ನಾಡ ಮನವ ಸೆಳೆಯುವೆ.

ಲೋಕಾಲೋಕಗಳನಿಂತು
ಲೋಕೋತ್ತರವಾಗರಳಿಸಿ
ಯುಗಾಂತರದ ಧರ್ಮಮತಗಳನ್ನು ಸ್ಥಾಪಿಸಿ
ಮರೆಯಾಗುವೆ ಮೂಲೆಯಿಂದ
ಬಾಳಮೂಲದಾಳದಲ್ಲಿ
ಚಿರನವೀನವಾದ ಚೆಲುವನನುರೂಪಿಸಿ.

ಬಾಳಿನ ಬಯಲಾಟದಲ್ಲಿ
ಪಾತ್ರವಹಿಸಲೊಲ್ಲದಾಗು–
ಅಭಿನಯಿಸಿದೆ ನಿನ್ನ ದೃಶ್ಯಗಳನ್ನೆ, ನಟವರ!

ನಿನ್ನ ಬಾಳ ಸುಖದುಃಖವ
ಹೋಮಿಸುತ್ತ ನಿರ್ಲಿಪ್ತನ
ಸಿದ್ಧಿಯನ್ನು ಪಡೆಯುತಾದೆ ಸಾತ್ವಿಕತ್ಪರ.

---

## ೮. ಕಾವ್ಯಗುರು

೧

ನಿನ್ನಾಸೆಯು ಹೂವಿನಾಸೆ.
ಕಾಯಾಗುತ ಹಣ್ಣಾಗುತ
ಕೆಲವು ಬೀಜಗಾಳ ನೆಲಕೆ ಮೀಸಲಿರಿಸಲು
ಬಾಳ್ಗನಸನು ಕಂಡು ಬಂದೆ;
ನೆಲೆಗಾಣದ ಕಲೆಯ ತಂದೆ:
ಇಂದ್ರಜಾಲವಿತ್ತು ದೇವೇಂದ್ರ ಹರಸಲು.

ಗಂಧರ್ವರ ಲೋಕದಲ್ಲಿ
ಲೀಲೆಯಿಂದ ಬಾಳಿ ಬದುಕಿ
ಗಂಧವತಿಯ ನೆನೆಸಿ ಭೂಮಿಗಿಳಿದು ಬಂದಿಹೆ.
ನರದೇಹದ ಜವ್ವನಿಕೆಯ
ಹೊದ್ದು ಕಾರಣಾಂತರದಲಿ
ಮನುವಂಶದ ಮಾಯೆಗಳನು ಹೊಂದಿ ನಿಂದಿಹೆ.

ಸ್ವಯಂಸಿದ್ಧ ಚಿತ್ರಕಾರ
ಪರಮಹಂಸಪದದ ಪ್ರಜ್ಞೆ
ಹುಟ್ಟಿನೊಡನೆ ನಿನ್ನ ಜೊತೆಯುಲಲೆದು ಬಂದವು.
ಬೇರೆ ಜ್ಯೋತಿ ಬೆಳಕುಗರೆದು
ನಿನ್ನಲಿದ್ದ ಪರಂಜ್ಯೋತಿ-
ಯನ್ನೆ ಮನದ ಪ್ರಾಂಗಣದಲಿ ಮುಂದೆ ತಂದವು.

ಎಳೆಯುನಿರಲು ಎಳೆಯರಾಟ;
ಗೆಳೆಯುನಿರಲು ಕೆಳೆಯ ನೋಟ;
ಸಾಹಿತಿಯಿರೆ ರಸದೂಟದಿ ನೀನು ರಮಿಸಿದೆ.

ಬಂದ ಪಾತ್ರವನ್ನು ವಹಿಸಿ
ಪ್ರೀತಿಪಟ್ಟು ಹಿಗ್ಗಿಕುಗ್ಗಿ
ಕೊನೆಗೆ ನಿನ್ನದೆಲ್ಲವೆಂದು ತಾಯ್ಗೆ ನಮಿಸಿದೆ.

ರಾಮಗಿರಿಯ ಪುಣ್ಯಾಶ್ರಮ-
ಕಿಳಿದು ಯಕ್ಷ ಬಂದ ತೆರದಿ
ಕಪ್ಪತದಡಿಗಿಳಿದು ಬಂದೆ ನಮ್ಮ ನಾಡಿಗೆ.
ಹಿಂಗಿತಯ್ಯ ನಿನ್ನ ಬರವಿ-
ಗೆಮ್ಮ ನುಡಿಯ ಹೀನದೆಸೆಯು ;
ಮತ್ತೆ ನೆರೆಯು ಬಂತು ನಮ್ಮ ನಾಡಹಾಡಿಗೆ.

ನಾಡಹಬ್ಬವನ್ನು ಮಾಡ-
ಲೆಂದು ನಾಡ ಮಬ್ಬುಕಳೆದು
ನವಚೇತನದೊಂದು ಚೆಲುವ ಬಿತ್ತಿ ಬೆಳೆಯಲು
ಸುತ್ತಿ ಬಂದೆ ನಾಡನೆಲ್ಲ
ಸಂಜೀವಿನಿಯಾಡಿಸುತ್ತ,
ಹುದುಗಿ ಹೋದ ಪ್ರಾಣಜ್ಯೋತಿ ಮತ್ತೆ ಹೊಳೆಯಲು.

ಕನ್ನಡದಾ ಪದಸಂಪದ,
ಮತ-ಕಾವ್ಯದ ಮಾರ್ಗದೇಸಿ-
ಯೊಳಗದೊಂದು ಹೊಸ ಮಂತ್ರದ ಗೆಲುವ ತುಂಬಿದೆ.
ಪೂರ್ಣ ಯೋಗದಾ ಸಮಗ್ರ
ಬೆಳಕಿನಲ್ಲಿ ಮತವೆಲ್ಲವ-
ನೊರೆದು ನೋಡಿ ಪೂರ್ಣತೆಯನೆ ನೀನು ನಂಬಿದೆ.

ಒಂದೊಂದೂ ನಾಡು ಹೊಲವು.
ಮಾನವಕುಲವಿಳೆಯೊಕ್ಕಲು.
ಬಿತ್ತಲಿರುವ ಬೀಜ ಪಡೆವ ಬೆಳೆಯದೊಂದೆಯೇ.

ದೇವನಿತ್ತ ಕರಿನೆಲವನು
ಶ್ರದ್ಧೆಯಿಂದ ಸಾಗುಗೊಳಿಸಿ
ಬಾಳ ಚೊಕ್ಕಗೊಳಿಪುದೆಂದೆ ನಲಿಯೆ ತಂದೆಯೇ.

ನಿನ್ನ ಬಾಳು ಬಗೆಯು ನುಡಿಯು
ಮೂಡಿಸಿರುವ ಮೂಲ ಮಂತ್ರ-
ವನ್ನು ನಾಡು ನೆನೆಯುತಿರಲಿ ನಿತ್ಯ ಪಾಲಿಸಿ.
ಕರಿನಾಡಿದು ಜಗಕೆ ಬೇರೆ-
ಯಲ್ಲ ಕೇಳಿದಲ್ಲ ಮೇಲು;
ಎಲ್ಲ ಸರಿಸಮಾನವೆಂಬ ನುಡಿಯ ಲಾಲಿಸಿ.

ಉಪ್ಪುಗೋಡೆಗಳನು ಕಟ್ಟಿ
ನಿಲ್ಲಲೇನು ? ಲವಣಂಗಳ
ಲಾವಣ್ಯವ ತರುವ ಕಡಲದೊಂದೆ ಮೆರೆದಿದೆ.
ಪ್ರಾಂತವೆಂದು ದೇಶವೆಂದು
ಖಂಡವೆಂದು ಕೆಡುವದೇಕೆ ?
ಎಲ್ಲ ಕಡೆಗೆ ಬೆಳಕು ಹೊಳೆಯುದೊಂದೆ ಹರಿದಿದೆ.

ಚಿದಾಕಾಶ ತತ್ತ್ವವನ್ನು
ಜೊತೆಗೆ ತಂದು ನೆಲದಿ ನಡಲು
ಭೂಮಿಗಿಳಿದು ಬಂದೆ ನೀನು ಲೀಲೆಗೋಸ್ಕರ.
ಕರುನಾಡಿಗೆ ತೆರಳ್ವುದೆನಲು
ದೇವ, ಬಂದೆ ಕರುನಾಡಿಗೆ;
ಸಂವರ್ಧಿಸೆ ಕನ್ನಾಡಿನ ವರುಣ ಭಾಸ್ಕರ.

ಇಲ್ಲಿ ನೀನು ನಡಲೆಸಗಿದ
ಕನ್ನಡತೆಯು ಬಾಳ ಹಿರಿಮೆ
ಕಾಲ ಮಸುಳಿದಂತೆ ಮೇಲುಗಂಪು ಬೀಳ್ವುದು.

ದೇಹದೊಳಿರುವಾತ್ಮನಂತೆ
ದಿನದಿನಕೂ ಕಾಂತಿವಡೆದು
ಚೇತನಾಭ್ಯುದಯದ ಮೇಲ್ಮೆಯನ್ನು ಸಾರ್ವುದು.

೨

ನಾಡನೊಂದೆ ಕಟ್ಟಲಿಲ್ಲ.
ಗುಂಪುಗಟ್ಟಿ ಬೆಳೆದೆ ನೀನು.
ನೀನು ಬೆನ್ನು ತಟ್ಟಿ ಮುಂದೆ ಬಿಟ್ಟ ತರುಣರು
ಸೋಲೆನುವದ ಕಾಣಲಿಲ್ಲ ;
ಗೆಲುವನೆಂದು ಮಾಣಲಿಲ್ಲ
ಹಿಗ್ಗಿ ಹರಸುತಿರಲವರನು ನಾಡ ಶರಣರು.

ಸತ್ಯಕಿಲ್ಲವೆನಲು ಸಾವು
ಆತ್ಮಕೆಂತು ಬಹುದು ಸೋಲು ?
ನಿನ್ನ ಸಖರನಾತ್ಮವಿದರನಾಗಿ ಮಾಡಿದೆ.
ಅರವಿಂದದ ಸರಸಿಯಲ್ಲಿ
ಮತ್ತೆ ರವಿಯ ಜ್ಯೋತಿಯಲ್ಲಿ
ಗೆಳೆಯರೊಡನೆ ಬಗೆಯ ಬಯಲೊಳಾಟವಾಡಿದೆ.

ಅವರೆಸೆಯುವ ಬಾಣಗಳಿಗೆ
ಬೇರೆ ಗುರಿಯನೆಲ್ಲ ಮರೆಸಿ
ನೇರವಾದ ನಿರಿಯುದೆಂದು ಧ್ರುವವ ತೋರಿದೆ.
ಬಾಳ ಘನತೆಗಿಲ್ಲ ಸಾಟಿ ;
ಬಾಳನುಳಿದ ಸ್ವರ್ಗವು ಸಹ
ಪತನ ಹೊಂದಲಿರುವ ದುರ್ಗವೆಂದು ಸಾರಿದೆ.

ನೇಹದ ಸುಳಿಗಳಲಿ ಸಿಕ್ಕ
ನೇಹಿಗರನು ಬಿಡಿಸಿ ತಂದು
ನೇಹವು ಭರಿ ದಾರಿ-ದೀಪವೆಂದು ಕಲಿಸಿದೆ.

ಜೀವವದೇಕಾಕಿಯಹುದು
ದೇವನನ್ನು ನಿಲುಕುವನಕ;
ನೇಹ-ನಲುಮೆ ಕಿರಣ, ಸೂರ್ಯನಲ್ಲವೆನಿಸಿದೆ.

ಶೂನ್ಯದಂತರಾಳದಲ್ಲಿ
ತನ್ನಳವನ್ನುತಿಳಿದು ತಾನೆ
ಖೇಚರವಿಹ ತಾರೆಯು, ಗೋಚರವಿರಲಿನ್ನೊಂದು,
ಜೊತೆಗಿಲ್ಲದೆ ಜೊತೆಯಿರುವದು.
ಏಕಾಂತದಿ ಲೋಕಾಂತದಿ
ನೀ ತೋರಿದೆ ಗೆಳೆಯರ ಕೆಳೆ ಇಂತುಳಿಸುವದೆಂದು.

ಕನಸಿನ ತಗ್ಗಿನಲಿ ಬಿದ್ದ,
ಕಾವ್ಯದ ಮಾಯೆಯನೆ ಮೆದ್ದ
ಜೊತೆಗಾರರ ನೇವರಿಸುತ ದಾರಿಗಿಳಿಸಿದೆ.
ಜಂದಿಗೆಗೇ ಜೋತುಬಿದ್ದ,
ಇಂದ್ರಿಯಗಳ ಸೆರೆಯಲಿದ್ದ
ಸಂಗಡಿಗರ, ತಡೆವುದೆಂದು ಮನೆಗೆ ಕಳಿಸಿದೆ.

ನೀನು ನಟ್ಟ ಕರುಳು ಬಳ್ಳಿ,
ಸ್ನೇಹಮಲ್ಲಿಕಾಲತೆಯಿದು
ಹೂವು ಬಾಡಿ ಗೊಂಚಲುದುರಿ ಮುಗಿದು ಹೋದರೂ
ಬಾಳಿನಾಳದಲ್ಲೆ ಬೇರು
ಬಿಟ್ಟು ಬಳ್ಳಿವಳ್ಳಿಯಾಗಿ
ಕೊನರುತಲರುತಮರವಿರುವದಿಲ್ಲವಾದರೂ;

ಕನ್ನಡದಾಕಾಶದಲ್ಲಿ
ಸಪ್ತರ್ಷಿಯ ಮಂಡಲವೆನೆ
ಮುನ್ನಡೆಯುವ ಪಯಣಿಗರಿಗೆ ಬೆಳಕುಗರೆವುದು;

ಬಾಳನೊಂದೆ ನಂಬಿದಲ್ಲಿ
ಸುಪ್ಪಿಗೆಯ್ದು ನಮಿಸಿದಲ್ಲಿ
ಜೀವ-ಭಾವ ಪೂರ್ಣವೆಂಬ ಮಾತನೊರೆವುದು.

ಧಾರುಣಿಯೊಳಗೆಲ್ಲೆಡೆಯಲಿ
ಮೇಳವಿಸಲವಿಂಥ ಮೇಳ
ಕಾರಾಯುತಿ ಸಂಭವಿಸಲು, ಉದ್ಭವಿಸಲು ಗಾನ
ಕಾಲನ ಕೋಲಾಹಲವದು
ನಿರ್ಗತಿಕವು ನಿರ್ನಾಮವು ;
ಕೆಡಕಿನ ಕಡೆಗಾಲವಿದೆನೆ ರಣದೇವತೆಯಾನ.

೩

ಎಚ್ಚರಿಸಲು ಕರುನಾಡನು
ಎದೆಬಳಗವ ಮೇಳವಿಸಲು
ಜೀವವನೊಡಮೂಡಿಸಲೆನೆ ನೀನೊರೆದಿಹ ಕೃತಿಯು
ಸುಶ್ರಾವ್ಯವು. ಸಂಭಾವ್ಯವು
ಯುಗಯುಗದಲ್ಲೀ ಕಾವ್ಯವು ;
ಹೊಸ ಮಂತ್ರವು ಹೊಸ ದರ್ಶನವೀ ಸುಭಗ ಶ್ರುತಿಯು.

ದೇವದತ್ತ ಶಂಖವ ನೀ
ತುಂಬುಗಲ್ಲದಿಂದೂದುತ
ಓಂಕಾರವನಿಳೆಯ ದೇಗುಲದಲಿ ಗುಣಿಸಿದೆ.
ಸತ್ಯಸಂಧ ! ಸುದರ್ಶನವೆ
ನೀನು ಪಡೆದ ಚಕ್ರವಿರಲು
ತಪೋಭಂಗಕೆಸಗುವನೃತಗಳನು ಮಣಿಸಿದೆ.

ಸ್ವಾನುಭೂತಿಯುಳ್ಳ ಕವಿಗೆ
ಸಾನುಭೂತಿ ಸಾಧ್ಯವಲ್ತೆ ?
ನಿನ್ನ ದುಃಖ-ಸುಖಕೆ ಕೊನರಲಾತ್ಮದೃಷ್ಟಿಯು

ಮನುವಂಶದ ಹೃದಯುವನ್ನೆ
ಯುಕ್ಷ್ಮಕಿರಣದಂತೆ ತೋರು-
ತಲೆದೆ ಮುಗಿಲಿನಂತೆ, ಸುರಿಯುಲಮೃತವೃಷ್ಟಿಯು.

ಶಾಂತಿದಾಯಿನಿಯು ನಿಸರ್ಗ-
ದೇವಿ ; ಮಾನವೇತಿಹಾಸ
ಅರಳಲಿರುವ ಹೊಂಗನಸಿನ ಹಳವಂಡದ ಛಾಯೆ ;
ಬರಲಿಹುದರ ಬೆಳಕಿನಲ್ಲಿ
ಬಂದಿಹುದನು ಕಂಡೆ; ಕಾವ್ಯ-
ಶೈಲಿಯ ತುಂಬಿರೆ ನಿನ್ನಯ ಬಾಳ್‌ಬಿಸುಟದ ಮಾಯೆ.

ಚೆಲುವಿನ ಸಂಭೂತಿಯು ಧರೆ-
ಯೊಳಗೊಲವಿನ ಅನುಭೂತಿಯು
ಅಡಿಗಡಿಗರಳುವದಿಲ್ಲಿಯೆ ಕವಿಗೌತಣವಿತ್ತು.
ಸಾಧಕನಿದ ಮರಿತೊರಲಲು
ಕಂದಕದಲಿ ಗಂಹ್ವರದಲಿ
ಬರಿ ರೌದ್ರವನಾಹ್ವಾನಿಸಿ ಬಂತವನಿಗೆ ಕುತ್ತು.

ದೇವನಂತೆ ನಾಟ್ಯರೂಪಿ
ನಿನ್ನ ಕಲೆ; ಅನೇಕದಲ್ಲಿ
ಏಕಮೇವ ವಸ್ತುವನ್ನೆ ಕುರಿತು ಹಾಡಿತು.
ಶೈಲಿಯಲ್ಲಿ ನವರಸಗಳು ;
ಚಿರಸ್ಥಾಯಿ ಮನದಿ ಶಾಂತಿ ;
ತಿರುಳಿನಲ್ಲಿ ದಿವ್ಯಭಾವಗಣವು ಮೂಡಿತು.

ಇಳೆಯು, ನಿನ್ನ ಬಾಳ ಪೂರ್ಣ
ಸ್ಥಿತಿಯೆ ನೀನು ಕಾಂಬ ಕನಸು.
ದುಃಖವಪೂರ್ಣತೆಯ ಭಾವ; ಪೂರ್ಣತೆಯುದು ಸುಖವು.

ದುಃಖದಿಂದ ಸುಖಕೆ ಮುಕ್ತಿ
ಸುಖದಾಚೆಯು ದುಃಖಕೆಂದು
ಹೊರಳಿ ಕಾಂತಿವಡೆಯುತಿಹುದು ನಿನ್ನ ಕಾವ್ಯಮುಖವು.

ಅರಸನಲ್ಲಿ, ತಿರುಕನಲ್ಲಿ,
ಪತಿತೆಯಲ್ಲಿ ಪತಿವ್ರತೆಯ-
ಲುಚ್ಚ–ನೀಚರಲ್ಲಿ ಋಷಿ-ವಿಲಾಸಿಯಲ್ಲಿಯೂ
ಅರಳಲಿರುವ ತತ್ತ್ವಗಳನು
ಸಮವಿಶಾಲ ದೃಷ್ಟಿಯಿಂದ
ತೋರ್ವ ನಿನ್ನ ಕಲೆಗದಿಲ್ಲ ಯಾವ ಎಲ್ಲೆಯೂ.

ಕಲ್ಲೆ ಇರಲಿ, ಕುಸುಮವಿರಲಿ,
ನಾಡೆ ಇರಲಿ, ಹಾಡೆ ಇರಲಿ,
ಇಡಿ ಧರಿತ್ರಿಯಿರಲಿ: ಒಂದನಂತ ಕಾಲದಾ
ದಿವ್ಯ ದೃಷ್ಟಿಯಿಂದ ತಿರುಳ-
ನೊಳತಿರುಳನು ತೆರೆದು ತೋರ್ವೆ
ನೂಲ ನೂಲಿದೆನಲು ಮೂಲವನ್ನು ಮೂಲದಾ.

ಹೊಸ ಜಗವನು, ಹೊಸಯುಗವನು,
ಹೊಸ ನಲುಮೆಯ, ಹೊಸ ನೇಹವ,
ಹೊಸತು ವ್ಯಷ್ಟಿ–ಸಮಷ್ಟಿಗಳ ನಿನ್ನ ಕಬ್ಬವು
ಚಿತ್ರಿಸಿತ್ತು, ಮೂಡಿಸಿತ್ತು,
ಆಡಿಸಿತ್ತು, ಕೂಡಿಸಿತ್ತು.
ನಾಡಿಗಹುದು ನಿನ್ನ ಕಾವ್ಯ ಹಿರಿಯ ಹಬ್ಬವು.

ದೇಸಿಯಲ್ಲಿ ಮಾರ್ಗದಲ್ಲಿ
ಹಳತು' ಹೊಸತು ಮಾತಿನಲ್ಲಿ
ನೂರು ತಾಳ ನೂರು ಲಹರಿಯಾಯ್ತು ನಿನ್ನ ಗಾನವು ;

ಮೂಡ-ಪಡುವ ದೆಸೆಯ ಬೆಳಕು
ಹಳ್ಳಿ-ಪಟ್ಟಣಗಳ ಝುಳುಕು :—
ವಿವಿಧ ತಾಳಲಯವು ಕೂಡಿ ಕಾವ್ಯವೇಕತಾನವು.

ಬೆಳಗಿನಂತೆ ನಿನ್ನ ಕಾವ್ಯ
ನಿಂತಿತಯ್ಯ ಮೂರ್ತಿಗೊಂಡು.
ಯಮಕನೊಬ್ಬ ಬೆಳಕನೊಬ್ಬ ತುಳುಕನೊಬ್ಬ ಕಂಡನು.
ಇಂಪು-ಸೊಂಪಿಗೊಲಿದನೊಬ್ಬ;
ಇಂಗಿತಕ್ಕೆ ನಲಿದನೊಬ್ಬ ;
ಮೂಢನೊಂದು ಜ್ಞಾನಿಯೊಂದು ಸವಿಯನದರಲುಂಡನು.

ಆದರಲಿತ್ತು ಅರೋಚಕಿಗೆ
ಬೇಡಿದಷ್ಟು ನವರಸಾನ್ನ;
ಇತ್ತು ರಸಿಕ-ಸಹೃದಯರಿಗೆ ಉನ್ನಯನದ ನೋಟವು ;
ವಿಮರ್ಶಕರಿಗೆ ಹೊಸತು ರೀತಿ;
ವೇದಾಂತಿಗೆ ತತ್ತ್ವಸಾರ ;
ಲೋಕಾಂತಿಗೆ ಕಾಂಚನಮೃಗದೋಟವಿದ್ದ ಮಾಟವು.

ಇಂತೆಸೆಯಲಿ ನಿನ್ನ ಹಾಡು
ಕರುನಾಡಿಗೆ ಅರುಣೋದಯ
ವಾಗುತಿನಿತೊ ಮೂಡು ಮುಳುಗು ಮೂಡಿ ಮಳುಗಿ ಹೋದರೂ;
ಬೇರೆ ದಾರಿ ಬೇರೆ ಬೆಳಕು
ಬೇರೆ ರುಚಿಯು ಬೇರೆ ಶುಚಿಯು
ಬಂದು ಹಿಂದಿನಿಂದ ನಿಂದ ದೀಪ ಮಾಯವಾದರೂ.

೪

ನನ್ನ ಬಾಳ ಸರಿತದಲ್ಲಿ
ಹಾಳೆ ದೋಣಿಗಳನು ನಾನು
ತೇಲಿಬಿಡುತಲಿದ್ದೆ. ನೀನು ಕಡಲುಗಾಣಿಸಿ

ಬಿಟ್ಟೆ ನಿನ್ನ ಮನದ ಹಿರಿಯ
ಸರಕು ತುಂಬಿ ಹರದರಿವನು
ಕಾಣಲೆನ್ನ ಮಹತಿ ಹೆಚ್ಚಲೆಂದು ಹವಣಿಸಿ.

ನಿನ್ನಾತುಮವಾಹಿನಿಯಲಿ
ನಾನು ಧುಮುಕಿ ಮುಳುಗು ಹಾಕಿ
ಮುಳುಗಿದಂತೆ ಒಳಗಿನಾಳವಿರುವದರಿತೆನು.
ಇರಲು ನಾನು ಬಳಲಿ ಬತ್ತಿ
ಉಸುಬಿನರಣ್ಯವನು ಸುತ್ತಿ
ನಿನ್ನ ತರಂಗಿಣಿಯ ತಡಿಗೆ ನೋವ ಮರೆತೆನು.

ನಾನದೊಂದು ಕಿನ್ನರಿಯನು
ಹಿಡಿದು ಹಾಡಿ ಬಾಳುತಿದ್ದೆ;
ಕೊಳಲನಿತ್ತು ಧೀರಲಲಿತ ನುಡಿಯ ನುಡಿಸಿದೆ;
ವಿವಿಧ ರಾಗಗಳನು ಕಲಿಸಿ
ಯೋಗಭೋಗಗಳನು ತಿಳಿಸಿ
ಒಂದೆ ತಾನದೊಂದೆ ಸ್ವರದ ಸೆರೆಯ ಬಿಡಿಸಿದೆ.

ಚೆಲುವಿನ ಗುಡಿಯಿಂದ್ರದೀಪ-
ದಡಿಗೆ ಬಾಳ್ದಿ ಬರಿ ಪತಂಗ;
ಒಳಗುಡಿಯಲ್ಲಿನಗೆ ತೋರ್ದೆ ಚೆಲ್ವನೆಲೆಯನು.
ಚೆಲ್ವ ಸೀರೆಯಂಚೆ ಚೆಲುವ-
ದೆಂದೆ ನಾನು. ನನ್ನನೆತ್ತಿ
ಚೆಲ್ವ ಕೈಯಲಿತ್ತು ತೋರ್ದೆ ತಾಯ ಮೊಲೆಯನು.

ಯಾವ ನಾಡಿಗಿಲ್ಲ ಪರಿಧಿ–
ರೇಖೆ ತರುವ ಕಣ್ಣುಕಟ್ಟು
ಯಾವ ನಾಡಿನಾ ಗವಾಕ್ಷ ಮುಗಿಲು-ಕಡಲನು

ಕೊನೆಯಿಲ್ಲದೆ ಕಾಣುತಿಹುದೊ
ತಂದೆಯಂಥ ನಾಡಿಗೆನ್ನ-
ನೆಲ್ಲ ಚಿಕ್ಕವೆಳಕಿನಿಂದ ತುಂಬಿ ಮುದುಳನು.

ಕಡಲ ತೀರದಲ್ಲಿ ಕೆಂಪು
ಕುಸುಮವೊಂದದೊಂದೆ ನಿಲ್ಲು-
ತುರಿಗಂಣಿನ ರವಿಯ ಕಿರಣಕಂಜದಳುಕದೆ,
ಉನ್ಮೀಲಿತ ನಯನದಿಂದ
ತಿರುಗಿ ತಾನಿಲಿಂಪನಂತೆ
ಚಂಡಕರನ ಕಂಡ ತೆರದಿ ನಿಂತೆ ಬಳುಕದೆ.

ಆ ಕುಸುಮದ ದೇನೆ ಬಯಕೆ
ತಾಂಬುಗೊಟ್ಟ ಮಿಡಿಯು ನಾನು
ಚಂಡಕಿರಣನೆನ್ನ ಮುಂದೆ ಮಾಗಿಸಿದ್ದರೂ ;
ಅಹುದು ನಿನ್ನ ನೇಹ ಸ್ವರ್ಗ-
ಸುಖವು ಹಲವು ಜೀವಿಗಳಿಗೆ,
ತಮ್ಮ ತಮ್ಮ ವಿಧಿಯನವರು ಭೋಗಿಸಿದ್ದರೂ.

೩

ಜೊತೆಯು ಬಾಳನಿಂತು ಬೆಳಗಿ
ನಾಡ ಜೀವವನ್ನು ತೊಳಗಿ
ಗಂಧರ್ವನೆ ! ಬಂಜರೇಕೆ ನಿನ್ನ ಬಾಳುವೆ ?
ಯಾವ ಶಾಪದಿಂದ ಗ್ರಸ್ತ ?
ಆರ ಕೋಪದಿಂದ ತ್ರಸ್ತ ?
ಗೀತೆಯೊರಿವ ಗೃಹದೊಳೇಕೆ ವಿಧಿಯ ! ಊಳುವೆ ?

ಉರಿಬಿಸಿಲಲಿ ನೀನು ನಿಂತೆ ;
ರವಿಯೆ ನಿನ್ನ ಮುಳ್ಳುಮುಕುಟ ;
ಮಾಗಿಲಿನಂತೆ ಬಟ್ಟ ಬಯಲು ನಿಷ್ಣ ಜೀವನ.

ಆತ್ಮಯೋಗವೊಂದೆ ಸಫಲ ;
ಉಳಿದುದೆಲ್ಲ ನಿನಗೆ ವಿಫಲ.
ಇಂತಿದುಚಿತವೆಂದು ಬಗೆದನೆಂತು ಪಾವನ ?

ಅಲ್ಪತುಚ್ಛ್ಯಯಹುದು ನೀನು ;
ಕಲ್ಪಕತೆಯೆ ನಿನ್ನ ನಿಧಿಯು ;
ಯುಗಪುರುಷನು ; ನಾಡೆ ನಿನ್ನ ಪಾಡ ಮರೆತಿದೆ.
ನಿನ್ನ ಕೃತಿಗೆ ಮಾನವಿತ್ತು
ನಿನ್ನ ಬಾಳೆ ಶೂಲವಿರಲು
ಮೌನವಾಂತ ಮರವಿನಲ್ಲಿ ತಾನು ನುಂತಿದೆ.

ಗುಂಪುಗಟ್ಟಲೆಸಗಿ ನಿನ್ನ
ಬಾಳು ತಾನೆ ಮೂಲೆಗುಂಪು ;
ನಾಡ ಕಟ್ಟಲೆಸಗಿ ಕೊರಕೆ ನಿನ್ನ ಮುತ್ತಿತು.
ಕಟ್ಟವಾಗಲನುವಿಲ್ಲದೆ
ನಿನ್ನ ಪ್ರತಿಭೆಯರ್ಧಬಾಲು
ಹೊಳೆದಳಿಯುವ ಮಾತಿನಲ್ಲಿ ಜನ್ಮವೆತ್ತಿತು.

ತನ್ನ ತಿದ್ದಲೆಂದು ಬಂದ
ಕೋವಿದರಿಗೆ ಮದ್ದನೀವ
ರೂಢಿಯೊಂದು ಮನುಕುಲಕ್ಕೆ ಮೊದಲಿನಿಂದಿದೆ;
ತನ್ನ ಕೀರ್ತಿಯನ್ನು ಕಳೆಯ-
ಲಾಳವಾಗಿ ಹೆಣಗಿದವರ
ಬಾಳ ಕೊಳಿಸುವಂಥ ಕೀರ್ತಿಯುದಕೆ ಸಂದಿದೆ.

ಮುಳ್ಳು ಮುಕುಟವನ್ನು ಹೊತ್ತು
ಬಟ್ಟ ಬಯಲಿನಲ್ಲಿ ನಿಂತ
ಗಂಧರ್ವನೆ ! ನಾಡದೇವಿ ನಿನ್ನ ಕಾಯುತ

ರೋದಿಸುವಳು ಮುಂದೆ ನಿನ್ನ
ಹಿರಿಮೆ-ಕಾರ್ಯಗಳನು ಕಂಡು
ಮಂಗಳಾತ್ಮನೆಂದು ನಿನ್ನೊಳೊಲಿದು ಹಾಡುತ.

೬

ನಿನ್ನ ದುಃಖವೇನೆ ಇರಲಿ,
ದೈವಜನ್ಯವೆಲ್ಲವೆಂದೆ;
ಬೇಕದೆಂದೆ. ಸಿಹಿಯ ನೆನೆಸಿ ಕಹಿಯ ಮರೆತಿಹೆ.
ಬದುಕು ತರುವ ಸುಖವದೆಂದು
ಸುಹೃದರೊಡನೆ ನಾಡಿನೊಡನೆ
ಮಾನವಸಮುದಾಯದೊಡನೆ ನಲಿದು ಬೆರೆತಿಹೆ.

ನಿನ್ನ ದುಃಖಗಳನು ನುಂಗಿ
ಹೆರವರನ್ನು ಸಂತವಿಸುತ
ನಂದಿ ಹೋದ ದೀಪಗಳನು ಮತ್ತೆ ಹಚ್ಚಿದೆ.
ದುಃಖಮಯ ಪ್ರಪಂಚದಲ್ಲಿ
ಮಗುವಿನಾಟ, ಗಂಡಿನೋಟ,
ಹೆಣ್ಣಿನ ಸ್ಮೆರಣೆಯ ನೋಟಗಳಿಗೆ ಮೆಚ್ಚಿದೆ.

ಇತಿಹಾಸವನೋದಿ ನೀ-
ನಸಹ್ಯಪಟ್ಟುಕೊಳ್ಳಲಿಲ್ಲ;
ತತ್ತ್ವ–ನೇಹಮೋಹಗಳನು ಕಂದಿಸಿಲ್ಲವು;
ಮೋಹ–ಬುದ್ಧಿಯನ್ನು ಮುಸುಕಿ
ಕೊಲ್ಲಲಿಲ್ಲ ಕರುಳು ಹಿಸುಕಿ;
ಆನಂದದ ಶ್ರೀಭೆಯು,–ದುಃಖ ನಂದಿಸಿಲ್ಲವು.

ಇಹವು ಸತ್ಯ; ಪರವು ಸತ್ಯ;
ಮತ್ತೆ ಪರಾತ್ಪರವು ಸತ್ಯ-
ವೆಂಬ ಶ್ರದ್ಧೆಯಿಂದ ಬಾಳನಿಲ್ಲಿ ನಿಲ್ಲಿಸಿ

ಅಂತರಾಳವನ್ನು ತೆರೆದೆ
ಎಲ್ಲ ತರದ ಕಿರಣಗಳಿಗೆ,
ಜೀವಸುಮವ ದೇವನಡಿಗೆ ನಿತ್ಯ ಸಲ್ಲಿಸಿ.

ಅಳುವು-ನಗುವು, ನೇಹ-ನಲುಮೆ,
ಕನಸು—ನನಸು, ಬುದ್ಧಿ—ಪ್ರಾಣ-
ಗಳ ಮೂಲವ ತಿಳಿದು ಬೆಳೆಯುತಿಹ ವಿವೇಕವು,
ಅದ್ಭುತವಿಹ ಕಲ್ಪಕತೆಯು,
ಸುಂದರ ದಿವ್ಯಾನುಭೂತಿ,
ನಿದ್ದೆಯಲ್ಲು ಋತಾನೃತದ ವಿಂಗಡಿಕೆಯು,

ಸಾನುಭೂತಿ, ಸತ್ಯನಿಷ್ಠೆ,
ಎಣೆಯಿರದುತ್ಸಾಹಶಕ್ತಿ
ಬಾಳ್ಗೊಳದಲಿ ರೆಕ್ಕೆಯಾಗಿ ತೇಲಿಸಿದ್ದವು
ನಿನ್ನ ಜೀವಹಂಸವನ್ನು;
ಆರ್ಷತೆಯನು ಕವಿದ ತಮವ
ಮುಗಿಲಿನಲ್ಲಿ ಚಿಕ್ಕೆಯಾಗಿ ಸೋಲಿಸಿದ್ದವು.

ಮಂದವಲ್ಲ, ತೀವ್ರವಲ್ಲ ;
ಸಾವಧಾನ ನಿನ್ನ ಗತಿಯು ;
ಬಾನ ಬಯಲಿನಲ್ಲಿ ಗಾಳಿಯಡಿಯ ತುಳಿದಿಹೆ
ನಾರದನೊಲು ಸಂಚರಿಸುತ
ದೇವಸನ್ನಿಧಿಯನು ಹುಡುಕಿ ;
ನಾರದ ವೀಣೆಯನು ನಿನ್ನ ಕರದಿ ತಳೆದಿಹೆ.

ಇರಲಿ ನಿನ್ನ ದಿವ್ಯಗಾನ
ಕರ್ನಾಟಕದ ಕರ್ಣದಲ್ಲಿ
ನಿನದಿಸುತ್ತ ; ನಿನ್ನ ಪ್ರತಿಭೆಯುದರ ಹೃದಯುದಿ.

ಆದರ ದಾಂಗಿರಲಿ ನಿನ್ನ
ಬುದ್ಧಿಯಿತ್ತ ಅರಸುವೆಳಕು,
ಪೂರ್ಣವಿರಲು ನಿನ್ನ ಬಾಳು ಮುಕ್ತಿಯುದಯದಿ.

---

## ಉದಾರಚರಿತ

೧

ಹುಣ್ಣಿಮೆಯಲಿ ರಾರಾಜಿಪ
ಚಂದ್ರನ ಶೀತಲ ಕಾಂತಿಯು;
ಇದರೈಸಿರಿಗಿಂಬಿಲ್ಲದೆ ತುಂಬಿರುವಾ ಮುಗಿಲು;
ರಾಗಿಣಿಯರ ದ್ಯುತಿಕ್ರೀಡೆಗೆ
ತೇಲುವ ದೋಣಿಗಳಂತಿಹ
ನೀರದಗಳು: ಇಂತಿದೆ ನಿನ್ನಯ ಬಾನಿನ ಮಿಗಿಲು.

ಮೆಲುಗಾಳಿಯು ಮುಗಿಲೋಳಿಯ-
ನಲುಗಿಸಿತ್ತು; ಮಲಗಿಸಿತ್ತು;
ಅಂಬುದವೊಂದೊಂದೂ ಬಂದೆರಗುತ ನಿನ್ನಡಿಗೆ.
ಹೃದಯದಿ ನಿನ್ನಾ ತಿಳಿನಗೆ-
ಯನು ಬಿಂಬಿಸಿ ತುಂಬಿಸಿ ನಡೆ-
ದಿತ್ತದು ಬೆಳಕಿನ ಹೊಳೆಗಿರುವಾ ಪಂಥದ ತಡಿಗೆ

ಎಳೆಯರು ಕುಣಿದಿದ್ದರು; ಗೆಳೆ-
ಯರು ತಣಿದಿದ್ದರು ಸರು-
ವರು ಮಣಿದಿದ್ದರು ನಿನ್ನಾ ಕದಿರಿನ ಸುಧೆಗೆ.
ನಿನ್ನಾ ಚಂದ್ರಮಹಾಸವು
ಬರಲಳಿಯಿತು ಮರೆಮೋಸವು.
ಬಿದ್ದಣ ಬಂದೊದಗಿತು ಕುದಿಯುವ ಜೀವದ ಕ್ಷುಧೆಗೆ.

ನಿನ್ನಾ ತಿಳಿನಗೆಯಲಿ ನೆಲೆ-
ಸಿದ್ದಿತು ಸೌಂದರವಾಗಿಹ
ಸತ್ಯವು, ಕರುಣತೆ ಮಾಗುತ ಮೃದುಕೋಮಲವಿರಲು;
ನಿನ್ನ ಸುಧಾಕರ ಬಿಂಬವು
ಬಾಳ್ಮೊದಲಿಗೆ ಅಗ್ನಿಯುಪಾ-
ಸನೆಯಲಿ ತಾಗಿದ ವಹ್ನಿಗೆ ನಸು ಶ್ಯಾಮಲವಿರಲು.

ಬಾಳ್ಗಡಲಿನ ಮಂಥನದಲಿ
ವಿಷಜ್ವಾಲೆಯದುಜ್ವಲಿಸಲು,
ಕಸವಿಸಿಗೊಳ್ಳಲು, ಕಡಲಿನ ತುಂತುರ ಸಿಡಿಲಿರಲು,
ನಾಡಿನ ಶಿವಶಂಕರ ನಿ-
ನ್ನನು ಶೇಖರಿಸಿದನಾಗಲೆ,—
ತಲೆಗಾಯಲು, ತಂಗದಿರನ; ಸಂಜೇರಲು ಕೊರಲು.

ಸುಖವದು ಮಾಯಾಮೃಗಜಲ
ಎಂದೊರಲುವ ನಾಡಿಗೆ ನೀ
ನಗುವಿನ ಬಗೆಯನು ಕಲಿಸಿದೆ, ನಾಡೆದೆಯನು ತಣಿಸಿ.
ಸುಭಗತೆಯಿಲ್ಲದ ಶೂನ್ಯದಿ
ತೇಜವ ತುಂಬುತ ಕಿರಣಾ-
ಭರಣವ ತೊಡಿಸುತ ಸಿಂಗರಿಸಿದೆ ಮಳೆಬಿಲ್ ಮಣಿಸಿ.

ಭ್ರಾಂತ ಚಕೋರದ ಚಿತ್ತವು
ಶ್ರಾಂತವು, ಸಮಯವು ಬಂದಿರೆ.
ಮಸಣದ ಬಯಲಲ್ಲೂ ಗಂಗಾವತರಣವಿಹುದು.
ಸಲ್ಲೇಖನಕೂ ಪಾರಣ;
ದುಸ್ತಾಮಸಕೂ ತಾರಣ:
ಇಂತಿದು ಚಕ್ರೇಶನ ಸಂತತ ಘೋರಣವಿಹುದು.

ತಿಳಿನಗೆಯಲ್ಲಿಹ ಜಾಣ್ಮೆಗೆ
ತಲೆದೂಗಲು ಬುಧ-ರಸಿಕರು,
ತತ್ವದ ಸಹಜತೆಗರೆಮರುಳಾಗಿರೆ ಸಾತ್ವಿಕರು,
ನಿನ್ನಾ ನಯವಿನಯದ ನಿರ್-
ವಂಚನೆಗಾನಂದಿತರೆ–
ಲ್ಲರು, ಸತ್ಪದ ತಿಳಿಬೆಳಕಿಗೆ ಮೋಹಿಸೆ ತಾತ್ವಿಕರು.

ನಿಶಿಕಾಂತನ ತಣ್ಗದಿರಿಗೆ
ದ್ರವಿಸುವ ಶಶಿಕಾಂತಶಿಲೆ ಅ-
ಸಂಭಾವ್ಯವು ಶಶವಿಷಾಣದಂತೆ; ಎಂದರು.
ಜನಹೃದಯವೆ ಚಂದ್ರಕಾಂತ;
ಅಂತೆ ರೂಢಿ ಮರುಗಟ್ಟಿಸ-
ಲೆದೆಯು, ದ್ರವೀಕರಣ ನಿನ್ನ ಕೈಯಲೆಂದರು.

ನಕ್ಷತ್ರಗಳೆಮ್ಮ ತೊರೆದು
ತೂಗುತಿಹವು ದೂರ ನಭದಿ
ಪುಷ್ಯರಾಗ, ಪದ್ಮರಾಗ, ಸಿತರಾಗಗಳಾಗಿಯೂ.
ಬಾನ್ನವ, ನೀ ಬಾಂಧವನಿಹೆ
ನಮ್ಮ ಸನಿಯದಲ್ಲಿ ಸುಳಿದು;
ಅಮೃತತರಂಗಿಣಿಯರೆ ಬಗೆಯಾಭೋಗಗಳಾಗಿಯೂ.

ಸೂರ್ಯ ಸತ್ಯನಾರಾಯಣ-
ನೆನಲವನಾ ಪ್ರಖರ ತೇಜ-
ವನು ಸೇವಿಸಿ, ತಂಪುವಡಿಸಿ, ಪ್ರೇಯವಾಗಿಸಿ,
ಸಂತರ್ಪಿಸುತಿರುವೆ ನಿತ್ಯ
ಕ್ಷುರಧಾರೆಯ ಸತ್ಯವನ್ನು,
ನಮ್ಮ ಭೋಗದಾಸೆಯನ್ನೆ ಶ್ರೇಯವಾಗಿಸಿ.

೨

ಭೂತಲಕಿಹೆ ನೀ ಶೀತಲ ;
ನಿನ್ನಯ ಹೃದಯಾವರ್ತದಿ
ಜ್ವಾಲಾಮುಖಿ ಎನಿತಿರುವವೊ ! ನೀನೊರ್ವನೆ ಬಲ್ಲೆ.
ಹೀಗಿದ್ದರು ಸತ್ಯದ ದಾ-
ರಿಯ ಕವಿಯಲು ಗಾವಿಲರಿಳೆ,
ಹೊರಗಣ್ಣಿಗೆ ನೀನಾಗುವೆ ಬರಿ ತಾಮ್ರದ ಬಿಲ್ಲೆ !

ನೀನು ಕಂಡ ಸತ್ಯವೆಲ್ಲ
ಬಾಳ್ಪೊಲದಲಿ ಬೆಳೆದು ನಿಂತು
ಕಾಳನ ಕಣ್ ಕುಕ್ಕುವಂತೆ ಹೊಳೆಯಲಿಲ್ಲವೆನ್ನುವೆ.
ಅಪ್ಪಿತಪ್ಪಿ ಬಂದ ನುಡಿಗೆ
ಮನವಾವುದೊ ಮುದುಡಿಕೊಳಲು
ಘನವಿನ್ನೂ ಕೊರತೆಯನ್ನು ತುಂಬಲಿಲ್ಲವೆನ್ನುವೆ.

ನಿನ್ನ ಕಿರಣದೊಳಗೆಲ್ಲ
ಕಳೆಯದಂಥ ಕತ್ತಲಿರಲು,
ಅದನು ಕಳೆವ ಪ್ರಭೆಯನೀವುದೆಂದು ಬೇಡಿಕೊಳ್ಳುವೆ.
ಭೋಗದ ಸೀಮೆಯಲಿ ನಿಂತು
ಯೋಗ ಮರೆವ ಪಾಪ ಬೇಡ ;
ದುಃಖಕಿಂತ ಸುಖವು ಕಠಿಣವೆಂದು ಹಾಡಿಕೊಳ್ಳುವೆ.

ಎಂದು ಜೀವ ತನ್ನ ಮರೆತು
ದೇವನೊಬ್ಬನನ್ನೆ ನೆನೆಸಿ
ಭಾವಪೂರ್ಣವಿರುವದೆಂದು ಕಾವನನ್ನು ಕೇಳುವೆ.
ಬಂದ ದುಃಖ– ಅಚಲ ಶ್ರದ್ಧೆ-
ಯನ್ನು ಚಲಿಸದಿರಲಿ ; ದಿನದ
ತಪ್ಪು–ತಡೆಗಳೆಲ್ಲ ಹಿಂಗಲೆನುತ ನೀನು ಬಾಳುವೆ.

ನಾಡ ಹೀನದೆಸೆಯ ನೋಡಿ
ಮೇರೆವರಿವ ದುಃಖ-ಕೋಪ-
ಗಳನು ಶಾಂತಗೊಳಿಸುತಿರುವೆ ತನು-ಮನ-ಧನವನರ್ಪಿಸಿ,
ದಿವ್ಯ ಚರಣಯುಗಲದಲ್ಲಿ;
ನಾಡಿನುದಯಕಾಲದಲ್ಲಿ
ದುಡಿವ ಜೀವಿಗಳಿಗೆ ನಲುಮೆಗಾಣ್ಕೆಯನು ಸಮರ್ಪಿಸಿ.

ನೋವಿದಿಂದು ನೈಜ; ನಾಳೆ
ಮಾಯೆಯೆಂಬ ಘನೋಲ್ಲಾಸ
ನಿನ್ನ ಬಗೆಯ ಬಾನಿನಲ್ಲಿ ಧ್ರುವದಂತೆಯೆ ಮೂಡಿದೆ.
ಅಂತೆ ನಿನ್ನ ಜೀವ ತನ್ನ
ಕೊರತೆಗಳನು ಸರಿಸಿ ಜಗಕೆ
ಅಮೃತಸ್ಪರ್ಶಯೋಗವನ್ನು ನಲುಮೆಯಿಂದ ನೀಡಿದೆ.

೩

ರತ್ನಾಕರನೊರೆದ ಯೋಗ-
ಭೋಗದೊಂದು ಸಮನ್ವಯವ
ಕಾಣಲೆಳಸಿ ಧೇನಿಸುತ್ತ ನಿನ್ನೊಳದನು ಕಂಡೆನು.
ಭೋಗದ ಸಂತೃಪ್ತಿಯನ್ನು,
ಯೋಗದೊಂದತೃಪ್ತಿಯನ್ನು
ವ್ಯಾಪ್ತಿವಡೆದ ನಿನ್ನ ಬಾಳಿನೆಡೆಯೊಳಿಂದಿಗುಂಡೆನು.

ಸರಸ್ವತಿಯು ವರದ ಹಸ್ತ-
ವಿಡಲು, ನಡೆದು ಬರಲು ಲಕ್ಷ್ಮಿ,
ಒಲವ ತುಂಬಿ ಮಾಹೇಶ್ವರಿ ನೆರೆಯ ತರಲು ಬಾಳಿಗೆ,
ತವಸಿಯಂತೆ ನೀನು ಯೋಗ-
ಸಮಾಧಿಯಲಿ ಮನವನಿಟ್ಟು
ಗೊತ್ತು-ಗುರಿಯುದೊಂದೆ ಎಂದೆ: ನಿನ್ನಾತುಮದೇಳಿಗೆ.

ಕೀರ್ತಿಯೇ ಕಿರೀಟವಿರಲು,
ಭೋಗಸಿರಿಯು ಕವಚವಿರಲು,
ನೇಹ-ನಲುಮೆ ವಜ್ರಲೇಪವಿರಲು ದೇಹಕೆ,—
ಆತ್ಮವೆ ಕರವಾಳ; ಒರೆಯು
ಬಾಳ್ ಆತ್ಮಕೆ. ಒರೆದು ಒರೆದು
ಬಾಳ್ವುದೆಂದೆ; ರಮಿಸಲಿಲ್ಲ ಸಿಲುಕಿ ಮೋಹಕೆ.

ಇಂದ್ರರಾಗಿ ಭೋಗಿಸುತ್ತ
ಯೋಗಪ್ರಜ್ಞೆಯಿಂದ ಬಾಳಿ
ಜಿತೇಂದ್ರಿಯರಾಗಿ ಜಿಷ್ಣುಪದಕೆ ನಡೆದರು
ಅರ್ಹಂತರು. ಸತ್ಯವಿದನು
ನಾಡ ಕವಿಕುಲತಿಲಕರು
ಅರಿಸುತ್ತ ಅಮರಕೀರ್ತಿಯನ್ನು ಪಡೆದರು.

ಕಾವ್ಯಾಲಂಕಾರವಲ್ಲ;
ಮಾನವೀಯ ಸೀಮೆಯರಿತು
ಬಾಳಿನಲ್ಲೆ ಮೊಳೆತು ಫಲಿಸುವಂಥ ಚಂದವು,—
ಎಂದು ಸತ್ಯವಿದನು ನಿನ್ನ
ನಡೆ-ನುಡಿಯುಲಿ ಪಡೆಯಲೆಳಸಿ
ತೊರತೊಮ್ಮಿತು ಕೃತಿಗಳಿಂದ ಸುಮ್ಮಾನದ ಸ್ಪಂದವು.

ಯೋಗವೆ ಒಳಗೆಳೆವ ಉಸಿರು;
ಹೊರಗಾಡುವ ಉಸಿರೆ ಭೋಗ;
ಯೋಗ ಭೋಗ ಬೆರೆಯೆ ಮೆರೆವನಾತ್ಮಹಂಸನು.
ಬರಿ ಹೊರಗಿರೆ ಯೋಗಭ್ರಷ್ಟ;
ಒಳಸೇರಿರೆ ಜಗಕೆ ನಷ್ಟ;
ಉಸಿರಿನಂತೆ ದೇಹಿಯಿರೆ,— ಕುಲಾವತಂಸನು.

ಭೋಗವೆ ಜನ್ಮಗಳ ಪುಣ್ಯ;
ಯೋಗವೆ ಮುಂದಿರುವ ದಾರಿ;
ಭೋಗದ ಸಂಚಯವಹುದದು ಯೋಗಕೆ ದೀಪನವು.
ಹಿಂದಿನದನ್ನನುಭೋಗಿಸಿ
ಮುಂದಿನದನು ಮಾಗಿಸುತಿರೆ,—
ಅದೆ ಅಹುದಿಂದಿನ ಜನ್ಮಕೆ ಅಮೃತದ ಲೇಪನವು.

೪

ನಾಡು ನಿನ್ನ, ತಲೆಯಲಿಟ್ಟು
ಕುಣಿಯುತಿರಲು, ನೀನು ನಾಡ
ಚರಣಧೂಳಿಯನ್ನು ತಲೆಯಲಿರಿಸಿ ಕುಣಿಯುವೆ.
ಜನತೆ ನಿನ್ನ ಹಿರಿಮೆಗಳನು
ಗಾನ ಮಾಡಿ ತಣಿಯುತಿರಲು
ಜನತೆಗಿರುವ ದೈವಿಕತೆಯ ಹಾಡಿ ದಣಿಯುವೆ.

ಸೌಂದರ್ಯಕೆ ಮುಗ್ಧನಾದ
ನೀನು, ಹೆಣ್ಣು– ತಾಯಿಯೆಂದು
ಭಾವಿಸಿ ಮಗುವಿನೊಲು ಹೆಣ್ಣಿನೊಡನೆ ನಡೆಯುವೆ;
ಮತ್ತದೊಮ್ಮೆ ತಂದೆಯಂತೆ;
ನೈಜ ಭಕ್ತಿ–ವಿನಯದಿಂದ
ನಾಡಿನ ತಾಯದಿರ ಹರಕೆಗಳನು ಪಡೆಯುವೆ.

ಹಿರಿಯರೊಡನೆ, ಕಿರಿಯರೊಡನೆ,
ಕಿರಿಯನಾಗಿ ನಡೆದುಕೊಂಡು
ನಾಡ ಹಿರಿಯನೆಂದು ನೀನು ಮನ್ನಣೆಯನು ಹೊಂದಿಹೆ.
ವಿದ್ಯಾಗಂಗಾಸ್ನಾತಕ;
ವಿದ್ಯೆಯಲ್ಲವ್ಯೆ ಘಾತುಕ:
ಜಾನಪದದ ಜೀವನದಲಿ ಧರ್ಮಪದವ ಕಂಡಿಹೆ.

ಕೀರ್ತಿಯೇ ಕಿರೀಟವಿರಲು,
ಭೋಗಸಿರಿಯು ಕವಚವಿರಲು,
ನೇಹ-ನಲುಮೆ ವಜ್ರಲೇಪವಿರಲು ದೇಹಕೆ,—
ಆತ್ಮವೆ ಕರವಾಳ; ಒರೆಯು
ಬಾಳ್ ಆತ್ಮಕೆ. ಒರೆದು ಹಿರಿದು
ಬಾಳ್ವುದೆಂದೆ; ರಮಿಸಲಿಲ್ಲ ಸಿಲುಕಿ ಮೋಹಕೆ.

ಇಂದ್ರರಾಗಿ ಭೋಗಿಸುತ್ತ
ಯೋಗಪ್ರಜ್ಞೆಯಿಂದ ಬಾಳಿ
ಜಿತೇಂದ್ರಿಯರಾಗಿ ಜಿಷ್ಣುಪದಕೆ ನಡೆದರು
ಅರ್ಹಂತರು. ಸತ್ಯವಿದನು
ನಾಡ ಕವಿಕುಲತಿಲಕರು
ಅರಳಿಸುತ್ತ ಅಮರಕೀರ್ತಿಯನ್ನು ಪಡೆದರು.

ಕಾವ್ಯಾಲಂಕಾರವಲ್ಲ;
ಮಾನವೀಯ ಸೀಮೆಯರಿತು
ಬಾಳಿನಲ್ಲೆ ಮೊಳೆತು ಫಲಿಸುವಂಥ ಚಂದವು,—
ಎಂದು ಸತ್ಯವಿದನು ನಿನ್ನ
ನಡೆ-ನುಡಿಯಲಿ ಪಡೆಯಲೆಳಸಿ
ಹೊರತೊಮ್ಮಿತು ಕೃತಿಗಳಿಂದ ಸುಮ್ಮಾನದ ಸ್ಪಂದವು.

ಯೋಗವೆ ಒಳಗೆಳೆವ ಉಸಿರು;
ಹೊರಗಾಡುವ ಉಸಿರೆ ಭೋಗ;
ಯೋಗ ಭೋಗ ಬೆರೆಯೆ ಮೆರೆವನಾತ್ಮಹಂಸನು.
ಬರಿ ಹೊರಗಿರೆ ಯೋಗಭ್ರಷ್ಟ;
ಒಳಸೇರಿರೆ ಜಗಕೆ ನಷ್ಟ;
ಉಸಿರಿನಂತೆ ದೇಹಿಯಿರೆ,— ಕುಲಾವತಂಸನು.

ಭೋಗವೆ ಜನ್ಮಗಳ ಪುಣ್ಯ;
ಯೋಗವೆ ಮುಂದಿರುವ ದಾರಿ;
ಭೋಗದ ಸಂಚಯವಹುದದು ಯೋಗಕೆ ದೀಪನವು.
ಹಿಂದಿನದನ್ನನುಭೋಗಿಸಿ
ಮುಂದಿನದನು ಮಾಗಿಸುತಿರೆ,—
ಅದೆ ಆಹುದೀರ್ಘ ಜನ್ಮಕೆ ಅಮೃತದ ಲೇಪನವು.

೪

ನಾಡು ನಿನ್ನ, ತಲೆಯಲಿಟ್ಟು
ಕುಣಿಯುತಿರಲು, ನೀನು ನಾಡ
ಚರಣಧೂಳಿಯನ್ನು ತಲೆಯಲಿರಿಸಿ ಕುಣಿಯುವೆ.
ಜನತೆ ನಿನ್ನ ಹಿರಿಮೆಗಳನು
ಗಾನ ಮಾಡಿ ತಣಿಯುತಿರಲು
ಜನತೆಗಿರುವ ದೈವಿಕತೆಯ ಹಾಡಿ ದಣಿಯುವೆ.

ಸೌಂದರ್ಯಕೆ ಮುಗ್ಧನಾದ
ನೀನು, ಹೆಣ್ಣು– ತಾಯಿಯೆಂದು
ಭಾವಿಸಿ ಮಗುವಿನೊಲು ಹೆಣ್ಣಿನೊಡನೆ ನಡೆಯುವೆ;
ಮತ್ತದೊಮ್ಮೆ ತಂದೆಯಂತೆ;
ನೈಜ ಭಕ್ತಿ-ವಿನಯದಿಂದ
ನಾಡಿನ ತಾಯದಿರ ಹರಕೆಗಳನು ಪಡೆಯುವೆ.

ಹಿರಿಯರೊಡನೆ, ಕಿರಿಯರೊಡನೆ,
ಕಿರಿಯನಾಗಿ ನಡೆದುಕೊಂಡು
ನಾಡ ಹಿರಿಯನೆಂದು ನೀನು ಮನ್ನಣೆಯನು ಹೊಂದಿಹೆ.
ವಿದ್ಯಾಗಂಗಾಸ್ನಾತಕ;
ವಿದ್ಯೆಯುಲ್ಲವ್ಯೆ ಘಾತುಕ:
ಜಾನಪದದ ಜೀವನದಲಿ ಧರ್ಮಪದವ ಕಂಡಿಹೆ.

ಪಡುವಣದಾಸೆಗೆ ಜೋಲುತ,
ಶಬ್ದದ ಮಾಯೆಗೆ ಸೋಲುತ
ತನ್ನರಿವಿಗೆ ಹೊರತಾಗಿದೆ ಈ ಭಾರತ ದೇಶ.
ಗೀರ್ವಾಣಿಯ ಸವಿ ಮರೆಯುತ,
ಕನ್ನಡದೈಸಿರಿ ತೊರೆಯುತ,
ಕಂಗಾಲಾಗಿಹುದೆಂದಿಹೆ ವಿಮಲತೆಗಳ ಕೋಶ.

ನಾಡಿನ ಕಳೆ ಬೇಕೆಮ್ಮಯ
ನಡೆ-ನುಡಿಯಲಿ ; ಸಂಸ್ಕೃತಿಯಲಿ ;
ಅಲ್ಲಮ-ಕನಕರ ಮರೆತಿರೆ ನಮಗೇತಕೆ ಕೆಲ್ಲಿ ?
ಗಾರ್ಗೇಯಿಯ ಸಂವಾದವ
ಓದದೆ ಆ ಪ್ಲೇಟೋವಿನ
ಸಂಭಾಷಣೆಗಳ ಪಠನದಿ ಆರೋಗ್ಯವದೆಲ್ಲಿ ?

ಹಳ್ಳಿಯವಗೆ ಬುದ್ಧಿಗಲಿಸಿ,
ನಾಗರಿಕಗೆ ನಂಬುಗೆಯನು,
ಎಳೆಗಬ್ಬಿಗರೆದೆ ಅರಳಿಸಿ ಸಾಧನವನು ತೋರುವೆ.
ಹಿರಿಸಾಹಿತಿಗಳ ಮನ್ನಿಸಿ,
ರಸಿಕರನಹುದಹುದೆನ್ನಿಸಿ,
ಎಲ್ಲರ ಗುರಿ ಬಾಳ್ಸಿರಿ ಎನ್ನುತ ಬಳಿಸಾರುವೆ.

ಹೆರವರ ಮನೆಯಭ್ಯಾಗತ-
ನಿರೆ, ಹುಳಿಯಲಿ ಕಾರವು ಮಿಗೆ,
ಸರಿಯಾಗಿದೆಯೆನ್ನುತ ಆ ದಿನ ಸಾರನೆ ಕುಡಿಯುವೆ.
ಎಲ್ಲೆಲ್ಲಿದ್ದೆಮನ ನಿರ್ಮಲ,
ಎಲ್ಲಿದ್ದೆ ನಿಷ್ಪಾಪದ ಜೀ-
ವನ, ಅಲ್ಲೆಲ್ಲಾ ಸರಿಯೆಂಬೊಂದುಕ್ತಿಯನಾಡುವೆ.

ನಿನ್ನ ಸಂಪ್ರದಾಯ–ರೀತಿ
ಸುಧಾರಕರ ಕೆಣಕಲಿಲ್ಲ;
ಯಾವ ಪ್ರಾಣಿಯನ್ನು ಭೂತದಯೆಯು ಮರೆಯಲಿಲ್ಲವು.
ಬಂದುದೆಲ್ಲ ದೈವ ನಿನ್ನ
ದೀಪನಕ್ಕೆ ತಂದಿತೆಂದೆ.
ಉಚ-ನೀಚವೆಂದದಾವುದನ್ನು ತೊರೆಯಲಿಲ್ಲವು.

೫

ಬೇಡ, ಕಬ್ಬವೆಣ್ಣಿಗಾವ
ಸಿಂಗಾರವು ಬೇಡವೆಂದೆ.
ಇದ್ದುದನಿದ್ದಂತೆ ನುಡಿಯೆ ಮುದ್ದು ಕಾವ್ಯವಿರುವದು.
ಹೇಳಬಯಸುವಂಥ ಮಾತಿ-
ನಲ್ಲಿ ಹಿರಿಮೆಯಿರಲು ಸಾಕು;
ತನ್ನ ಹೊನ್ನು-ರನ್ನಗಳನು ತನ್ನ ಜೊತೆಗೆ ತರುವದು.

ಅನ್ಯೋಕ್ತಿಯು ಬೇಡ; ಮತ್ತೆ
ರೂಪಕಗಳ ರಾಜ್ಯ ಬೇಡ;
ದಿನದ ಬಾಳಿನಂತೆ ಸಾಜವಿರಲಿ ದಿನದ ಕಬ್ಬವು.
ಋಣಗೂಳಿನ ಗೊಡವೆ ಬೇಡ;
ಹದವನರಿತ ಕೈಯು ತುಸುವೆ
ಸವಿಯ ಬೆರಸೆ, ದಿನಂದಿನದ ಸಾಹಿತ್ಯವೆ ಹಬ್ಬವು.

ಬೇಡ ಕನಸಿನಲ್ಲಿ ಕಣ್ಣು
ಕಟ್ಟುವಂಥ ಜ್ಯೋತಿರ್ಲತೆ;
ಒಳಗಿವಿಯಲಿ ಗುಣಗುಣಿಸುವ ಸಮ್ಮೋಹನನಾದವು;
ಧರಣಿಯಲ್ಲಿ ಬೆಳಕಿನಾಟ,
ಧ್ವನಿಯ ಸಿರಿ, ಅನಂತವಿರಲು,
ಪಾವನತೆಯುವಿರಲು—ಮತ್ತದೇಕೆ ಬೇರೆ ಶೋಧವು?

ದೇವನ ಸಂದೇಶವಲೆದು
ಬಹುದು ಗಾಳಿಯಲೆಯಲೆಯಲಿ.
ಕಿವಿಯ ತಿದ್ದು,— ಗಾಳಿಯ ಇಂಚರವ ಪಡೆಯುವಂತೆಯೆ.
ಕಿವಿಯು ಸೂಕ್ಷ್ಮವಾದ ಹಾಗೆ
ಸೂಕ್ಷ್ಮತಮವದೆಲರಿಂಚರ.
ಎದೆಯ ವೀಣೆ ಸಿದ್ಧವಿರಲಿ ಗಾಳಿ ಮಿಡಿಯುವಂತೆಯೆ.

ಬಧಿರಗೆಲ್ಲಿ ಕಾಂತಾಸ್ವರ?
ಕೋಣನಿಗೇತಕೆ ಕಿನ್ನರಿ?
ಭೌತಿಕಗೆಲ್ಲಿದೆ ಅಮರರ ಗಂಧರ್ವರ ಗಾನ?
ತಾರಾಸ್ವರ, ಗ್ರಹಸಂಹುತಿ
ಇಲ್ಲೊಂದವಗಿಲ್ಲವು. ಶ್ರುತಿ-
ಯಿಲ್ಲೊಂದವಗಿಲ್ಲೇ ಇಲ್ಲವು ಮಂತ್ರವಿತಾನ.

ಲೋಕವ ತೊರೆದಿರಲೇನಿದೆ?
ಲೋಕವ ತಿಳಿದಿರೆ,— ಮುಂದಿದೆ.
ಎಲ್ಲಾ ಸೃಷ್ಟಿಗಳೆಲ್ಲಾ ಚೆಲುವಿಕೆಗಡಿಗಲ್ಲು
ಭೂಮಿಯು. ಭೂಮಿಯ ಮರೆತವ-
ಗಂತರ-ಬೆಂತರ ನಾಡಿದೆ.
ಅರಿತವಗತಿ ಪಾವನವಿದೆ ನೆಲ-ಹೂ-ಹುಡಿ-ಹುಲ್ಲು.

ಕೃಷ್ಣನು ಕೊಳಲೂದಲು ಲೋ-
ಕವು ಮೋಹನ-ಮಂತ್ರದಿ ಸೆರೆ;
ಗೀತೆಯನೊರೆಯಲು ನರನಿಗು ಸಂದೇಹ–ವಿಲಂಬ.
ಬರಿ ತತ್ವಕೆ ಹೆಚ್ಚಳವೇ?
ಸವಿ ನುಡಿಯಿಂದೆದೆ ತಟ್ಟಲು,
ಜೀವನ ಚೇತನೆಗೊಳಿಸಲು ಕುಣಿದಿರುವದು ಕಂಬ.

ಇಂತದೊಂದು ಹೊಸ ದೇಸಿಯ
ಮಾರ್ಗವನ್ನು ಕಂಡು ಹಿಡಿದು
ಪಾಮರ-ವಿಬುಧರನೊಲಿಸುವ ಗೆಲುವು ನಿನ್ನ ಹೊಂದಿದೆ.
ಬುದ್ಧಿ-ಪಾರಮಾರ್ಥಗಳನು
ಸೂಜಿ-ವೊಲ್ಲೆಯಂಥ ನಯದ
ಭಾವ-ಶೈಲಿಯಲ್ಲಿ ಪವಣಿಸಿರುವ ಕೀರ್ತಿ ಸಂದಿದೆ.

೬

ನಿನ್ನ ಕಾವ್ಯ ಜೊನ್ನಬಯಲು;
ಅಲ್ಲಲ್ಲಿಗೆ ಪಲ್ಲವಿಸಿದ
ತರುಲತೆಗಳು; ನೋಡಿದಲ್ಲಿ ನಿದ್ರಿಸಿರುವದು
ತಣ್ಣೆಳಕದು; ಕೊಳದಿ ನಿನ್ನ
ಬಿಂಬ ಬಿಂಬಿಸಿರಲು ಚರಾ-
ಚರದ ಮೇಲೆ ಅದರ ಮಾಯೆ ಮುದ್ರಿಸಿರುವದು.

ನೀನು ತುಂಬುಮಾತನೊರೆದ
ಗಳಿಗೆಗೊಮ್ಮೆ ಪೂರ್ಣ ಶಾಂತಿ
ಎಲ್ಲರ ಮನ ತುಂಬಿ ತುಳುಕಿ ಸೂಸುತಿರುವದು.
ಮಂದಹಾಸ, ಸಾನುಭೂತಿ,
ಶ್ರದ್ಧೆ, ಕರುಣೆ, ಸದ್ವಿವೇಕ-
ಗಳಿಗೆ ನಿನ್ನ ಬಂಧುರ ಕೃತಿ ಮೀಸಲಿರುವದು.

ಬಾಳ ನ್ಯೂನತೆಗಳ ಕಂಡು
ಕೂರ್ಗಣೆಯೆಸೆಯುವ ಭಾರ್ಗವ-
ನಾಗಲಿಲ್ಲ; ಜನಕನಾದೈ ಕ್ಷಮೆಯ ಮೂರ್ತಿಯು.

ಬಾಳ ಕೊರತೆಗಳನು ತೋರ್ದೆ,
ಮತ್ತೆ ಬಾಳಿನೊರತೆಗಳನು;
ನಿನ್ನ ಕೃತಿಗೆ ಕೊನರುತಿರಲು ಬಾಳಿನರ್ತಿಯು.

ನೀನು ನಕ್ಕ ನಗೆಗೆ ಮನವು
ನೋಯಲಿಲ್ಲ, ಬೇಯಲಿಲ್ಲ.
ನಗೆಗೇಡಿಹ ನರನು ನಕ್ಕನೆಲ್ಲರೊಂದಿಗೆ.
ನಿನ್ನ ನಗೆಯ ವಿಶಾಲತೆಗೆ
ಹಗೆಯೂ ಸಹ ಮಾಯವಾಗಿ
ಆ ಕ್ಷಣವೇ ಜಾರುತಿತ್ತು ಸಂದಿ-ಗೊಂದಿಗೆ.

ಶರಣರಲ್ಲು ಕೂಡ ಮಾನ-
ವೀಯ ಸರಣಿಯಿರುವದರಿತು
ತಪ್ಪು-ತಡೆಯದಾರಿಗಿಲ್ಲವೆಂಬ ಮಾತನಾಡುವೆ.
ತಪ್ಪನೊಪ್ಪಿ, ಅಪ್ಪಿತಪ್ಪಿ
ಬಿದ್ದ ಹೆಜ್ಜೆ ತಿದ್ದಲೊಡನೆ,—
ಅದುವೆ ಮುದ್ದು ಬಾಳ್ವೆಯೆಂಬ ತಿಳಿವನೊಲಿದು ನೀಡುವೆ.

ನಿನ್ನ ಕೃತಿಯು ಗರ್ಭಗುಡಿಯೊ-
ಳೊಂದೆ ಸಮನೆ ಶಾಂತವಾಗಿ
ಮೂರ್ತಿಯೆದುರು ಚೆಲುವ ಗೆಲುವ ಬೀರ್ವ ದೀವಿಗೆ.
ದಾರಿಕಾರನಾರೆ ಇರಲಿ,
ಬಂದು ನಿಲ್ಲುತೊಂದೆಗಳಿಗೆ
ಮರೆಯಬಹುದು ಸಾವು-ನೋವನದರ ಠಾವಿಗೆ.

ಮಾಣಿಯಿಂದ ತಿರುಪಾಣಿಯು
ವರೆಗೆ ಕಂಡೆ ಬಾಳ ಪಾಡೆ
ಸೃಜಿಸಿ ವರ್ಧಿಸಿದ ಅನಂತ ಪ್ರಕೃತಿಭೇದವ.

ಬಾಳ ಹಿರಿಮೆಗೊಲಿದೆ ಒರಗಿ,
ಬಾಳ ಕೀಳ್ಮೆಗೆದೆಯು ಕರಗಿ,
ಆಳವಾಗಿ ತೋರಿ ಪ್ರೀತಿ, ಕರುಣೆ, ಖೇದವ.

ನೀತಿಯು ರಸವಾಗಿ ಹರಿದು
ಪ್ರೀತಿ ನೀತಿಯಾಗಿ ಮೂರ್ತಿ-
ಗೊಂಡು ನಿನ್ನ ಕಾವ್ಯವನು ಪುನೀತವಾಗಿಸಿ
ಮೆರೆಯಿತಯ್ಯ,— ಗೋಕುಲದಲಿ
ಕೃಷ್ಣಗೆಂದು ಗೋಪಿಯೊರ್ವ—
ಒಲಿದು ಕಡೆದು ತಂದಿಹ ನವನೀತವಾಗಿಸಿ.

ಪರಮಾರ್ಥವು ದೊರೆವುದೆಂದು
ದೇವನಿತ್ತ ಸಂಚಕಾರ
ಈ ಪ್ರಪಂಚ, ಬಾಳ ಬೀಳುಗಳೆವ ಬಾಯಿಗೆ
ಸಂತರ್ಪಣೆ ಎಲ್ಲಿ? ದಿನದ
ದುಡಿಮೆಯನ್ನು ದೇವಗಿತ್ತು,
ಅರ್ಪಿಸುವದು ದೇಹವಿದನು ಭೂಮಿ ತಾಯಿಗೆ.

ಇಂತು ನೀನು ನುಡಿದು ನಡೆದು
ಸಂಸಾರದ ಸೊಬಗನೆಲ್ಲ
ದಿವ್ಯ-ಭವ್ಯವಾಗಿಸಿದ್ದೆ ನಾಡ ಮನದಲಿ.
ಬಾಳಿಗಿರಲು ಮಿದುವು, ಹದವು,
ದೂರವಿಲ್ಲ ಮುಕ್ತಿಪದವು;
ಎಂದು ನಲುಮೆಯಿಂದ ನುಡಿದೆ ಮಧುರ ಸ್ವನದಲಿ.

ನೋಡಬೇಕೆ ನಾಡೊಳಿದ್ದ
ವಾಸ್ತುಶಿಲ್ಪವೆಲ್ಲವನ್ನು?
ನೆನೆಸಬೇಕೆ ಇತಿಹಾಸವನೆಲ್ಲವನ್ನು? ಕೇಳುವೆ.

ಒಂದು ಗುಡಿಯು, ಒಂದು ಸನ್ನಿ-
ವೇಶ ಸಾಕು ಮನವರಳಲು;
ಆಳ ಬೇಕು, ಅಗಲಕೆ ಕೊನೆಯಿಲ್ಲವೆಂದು ಬಾಳುವೆ.

ಆಳವಿದ್ದು, ಅಗಲವಿದ್ದು,
ನೀಳವಾಗಿ ಬೆಳೆದ ನಿನ್ನ
ಬಾಳು-ಕಬ್ಬು ನಿಂತಿರುವವು ಕೈ ನೀಡುತ ಮುಗಿಲಿಗೆ.
ತೋಟಿಗ, ಆ ಕಾಲ, ನಿನ್ನ
ಫಲವನಿಳಿಸೆ ಮತ್ತೆ ಹಣ್ಣು
ಸುರಿಯುತಿಹವು; ಫಲಭಾರವು ನಿತ್ಯವವನ ಹೆಗಲಿಗೆ.

ಗೀತೆಯೊರೆದೆ. ನಾಟಕಗಳ-
ನೊರೆದೆ. ಕತೆಯ ಬರೆದು ಮೆರೆದೆ.
ಸರಸ್ವತಿಯ ದೇಗುಲದಲಿ ಸಾಲುದೀಪವಿಟ್ಟಹೆ.
ಎಲ್ಲ ಬಂಧ, ಎಲ್ಲ ಛಂದ
ನಿನ್ನಲಿಹವು ಸ್ವಚ್ಛಂದ:
ಮಹಾದ್ವಾರದಲ್ಲಿ ನೀನು ನುಡಿದೋರಣ ಕಟ್ಟಹೆ.

೭

ಅಮೃತಾಂಶುವೆ! ಏನು ಮುಂದೆ?
ಯಾವ ಬೆಳಕ ಬಯಸಿ ನಿಂದೆ?
ಯಾವ ಸುಳುವು ಹಿಡಿದು ಸಾಗುತಿಹುದು ನಿನ್ನ ಜೀವನ?
ನುಡಿವೆ ನೀನು: "ನಾನರಿಯೆನು;
ಬಂದ ದಾರಿ ನನ್ನದೆನುವೆ;
ಮಾಗಿಸಲೆನ್ನಾವ ಬೆಳಕು ಬೇಕು, ಬಲ್ಲ ಪಾವನ—

"ಬಾಳ ತೋಟದಲ್ಲಿ ನಾನು
ಬಣ್ಣವಡೆದು ಹಣ್ಣಲೆಂದು
ತೊಂಗಲಾಚೆ, ಬುಡದ ಕೆಳಗೆ, ಬೇರಿನಿಂದ ಪಡೆಯುವೆ

ಜೀವರಸವ. ಮೌನವಾಗಿ
ಉದುರಿಬಿಡುವೆ ತುಂಬಿ ಬರಲು
ನನ್ನಮಾಗಿ. ಪಾಡುಗಾಯಿಯೆನೆ ದೇವನು, ತಡೆಯುವೆ.—

"ಪೂರ್ಣದಿಂದ ಪೂರ್ಣಕಹುದು
ನನ್ನ ಪಯಣ. ಅಪೂರ್ಣತೆಯು
ಪೂರಣ ಬರುತಿರುವ ಕಾಲವೆಂ"ದು ದಾರಿ ಕಾಯುವೆ.
ಇಂದು ನಾಳೆ ಪೌರ್ಣಿಮಾಸು-
ಧಾಂಶುವಂತೆ ಪೂರ್ಣನಿರಲು
ಮುಗಿಲ ತುಂಬಿ ಕೊನೆವ ಬೆಳಕುಗಡಲಿನಲ್ಲಿ ಮೀಯುವೆ.

ಇಂದು ಸತ್ವವನ್ನು ಮೀರಿ-
ದಂಥ ತತ್ವದೊಡನೆ ನೀನು
ಬೆರೆಯಲಿಲ್ಲವೆನಲು,— ತುಂಬಬಹುದು ಕೊರತೆಯನ್ನುವೆ.
" ಕಜ್ಜವಾವುದಿಲ್ಲವೆನಗೆ.
ಸಜ್ಜುಗೊಳುವದೊಂದೆ ಕಾರ್ಯ.
ಹೆಜ್ಜೆಹೆಜ್ಜೆಗಿರಲಿ ಜೀವ ವೃದ್ಧಿಂಗತ," ಎನ್ನುವೆ —

" ಸಹಜವಾಗಿ ಜೀವವುದಿಸಿ
ಸಹಜವಿರಲು ಬೆಳಕು ಪಡೆದು
ತೀರ ಸಹಜವಾಗಿ ತನ್ನ ಪಕ್ವದೆಸೆಗೆ ಬಂದಿತು.
ಕುಂದು-ಕೊರತೆ, ಸಾವು–ನೋವು
ಗೊಬ್ಬರವೆನೆ ಕೊನರಿಸಿರಲು
ಮೊಗ್ಗೆ-ಹೂವು-ಕಾಯಿಯಾಗಿ ಹಣ್ಣು ಪುಣ್ಯ ಸಂದಿತು—

" ತೃಷ್ಣೆಯೆಲ್ಲ ಹಿಂಗುತಿರಲು
ಶುಕ್ಲ–ಕೃಷ್ಣ ಪಕ್ಷವಿರದ
ತಿಂಗಳೀವ ಮಂಗಳದಾ ಬರವನೆದುರುನೋಡುವೆ.

ಉದರಾಗ್ನಿಯ ಕಪ್ಪು ಕಲೆಯ.
ನೆಲ್ಲ ಕಳೆದ ಚಂದ್ರಮಸಿರೆ
ತಪ್ಪಲಿಳಿದು ಜನ್ಮವಿತ್ತ ಕಡಲ ಮಡಿಲ ಕೂಡುವೆ. ”

---

## ೧. ಕಣಸಿಗ

೧

ಕಾಣದೊಂದು ದೈವತವದು
ಮುಗ್ಧೆಯೊರ್ವಳಸುವ ಸೇರಿ
ದಿವ್ಯಭವ್ಯ ಶ್ರುತಿಗಳನ್ನು ನುಡಿಯುವಂತೆಯೆ
ಹಿರಿಗನಸಿನ ಸಿರಿಯು ಬಂದು
ನುಡಿಸಿತಯ್ಯ ನಿನ್ನ,— ರಂಭೆ-
ಯಂಗುಲವದು ವೀಣೆಯನ್ನು ಮಿಡಿಯುವಂತೆಯೆ.

ಯಾವ ಸಿದ್ಧಿಗಾಗಿ ನೂರು
ಸತ್ಕವಿಗಳು ತಪಿಸಬಹುದೊ
ಸಾವಿರಾರು ಕಂಗಳರಳಿ ಕಾಣಲೆಳಸಲು,—
ಅಂಥ ಸಿದ್ಧಿ ಬಾಗಿಲಲ್ಲಿ
ಬಂತು ಮುಜುರೆಗೈದು ನಿಂತು,
ಎಚ್ಚರದಲಿ, ನಿದ್ರೆಯಲ್ಲಿ ನಿನ್ನನೊಲಿಸಲು.

ನಂದನವನ, ಅಮರಲೋಕ,
ಇಂದ್ರಸಭೆಯುಪೇಂದ್ರಗಾನ,
ಗಂಧರ್ವರ ನೃತ್ಯ ಕಣ್ಣ ಕುಣಿಯೊಳಾಡಿತು.
ಪೂರ್ವಪುಣ್ಯಬಲವದೆನಿತೊ !
ಇಹಪರಗಳ ಸೌಂದರವನು
ನಿನ್ನ ಕನಸು ನಾಡಿನಲ್ಲಿ ಸೂರೆಮಾಡಿತು.

ಹೊಂಗನಸೇ ! ಚೆಂಗನಸೇ !
ನಿನ್ನಿಂಗಿತವಳೆದರಾರು?
ಲಕ್ಷ್ಮಿಯಂತೆ ಚಿರಚಂಚಲ ಸೀಮಂತಿನಿ ನೀನು !

ಬಲ್ಲರಾರು ಬಾಳ್ಗಡಲಲಿ
ನಿನ್ನ ಯೋಗನಿದ್ರೆ ಎಂದು
ಮುಗಿಯುವದೋ! ಅರಳುವದೋ ಹೃತ್ಕಮಲವು ತಾನು!

ಜನುಮಗಳಾ ಜಾತ್ರೆ ನೆರೆದು
ಪ್ರಾಣಪುರುಷನೊಂದನಾದಿ
ಬದುಕ ತೋರಿ ಚಿದ್ದಿಗಂತದಾಚೆ ಸರಿಯಿತು.
ಅನುಪಮ ಸುಂದರಿಯೋರ್ವಳು
ಸಮ್ರಾಜ್ಞಿಯ ಪದವಿಗೇರಿ
ಕುಳಿತ ಪಟ್ಟವಣೆಯ ತೆರದಿ ಹೃದಯ ಮೆರೆಯಿತು.

ಉಜ್ಜಯನಿಯ ಹಾಳಿನಲ್ಲಿ
ಹುಗಿದ ವಿಕ್ರಮಾದಿತ್ಯನ
ಗದ್ದುಗೆಯಿಹ ತಾಣದಲ್ಲಿ ಕುಳಿತ ಗೋವಳ
ತೀರ್ಪನಿತ್ತ ತೆರದಿ ಸಾಜ-
ವಿರಲು, ಸತ್ಯವಿರಲು ನೀನು
ಜೊತೆಗಾರರ ಬಾಳ ತಿರುಳ ನುಡಿದೆ ನಿಚ್ಚಳ.

ಸುರಾಸುರರ ಋಷಿವರ್ಯರ
ರಂಭೆಯೂರ್ವಸಿಯರ ಕಂಡೆ.
ರಾಜಕುಲಲಲಾಮರೆದುರು ಸುಳಿದು ಹೊಳೆಯಲು ;
ಔಪನಿಷದ ದರ್ಶನಗಳ
ಸರಿಸಮಾನವಾದ ರೂಪು
ಶ್ರುತಿಗಳೆಲ್ಲ ನಿನ್ನ ಮನದ ಬಯಲೊಳಿಳಿಯಲು.

೨

ಕನಸಿನ ಭಾಂಡಾರಕಿಂದು
ದೈವ ಬಂದು ಬೀಗ ಹಾಕಿ
ಮುತ್ತಿಯೊತ್ತಿ ನಿನ್ನ ದೂರ ಸರಿಸಿ ನಿಂತಿದೆ.

ಪರ್ವಣಿಯಲಿ ಗಂಗೆಯಾಗಿ
ಮುಂದೆ ತನಗೆ ತಾನೆಯಾದ
ಸರಿತದಂತೆ ನಿನ್ನ ಮನವು ಹರಿಯುವಂತಿದೆ.

ಓ! ಕನಸಿಗ! ಸ್ವರ್ಣ ಸ್ವಪ್ನ-
ವೇಕೆ ಮಾಯವಾದವಿಂತು?
ನಿನ್ನ ನುಡಿಯ ಜಾಲದಲ್ಲಿ ಹಿಡಿಯೆ ಹವಣಿಸೆ
ಜಾರಿದವೇ ಹೊಮ್ಮೀನಿವು?
ಮೌಕ್ತಿಕಗಳು ಕಳೆದವೇನು?
ಸರಸ್ವತಿಯ ಕೊರಳಿಗೆಂದು ನೀನು ಪವಣಿಸೆ?

ಇಲ್ಲ, ಅವನ ಗುಪ್ತನಿಧಿಯ-
ನೆಲ್ಲ ಬಯಲಿಗೆಳೆದೆಯೆಂದು
ಸ್ವಪ್ನರಾಜ್ಯದರಸ ನಿನ್ನ ಮೇಲೆ ಕೋಪಿಸಿ
ಭಾಂಡಾರಿಯು ನೀನು ಸಿರಿಯ-
ನೆಲ್ಲ ಸೂರೆಗೆಯ್ದೆಯೆಂದು
ಹಪ್ಪರಿಯುತ ತಳ್ಳಿಬಿಟ್ಟನೇನೊ ಶಾಪಿಸಿ?

ಹಾಲುಸಕ್ಕರೆಗಳ ತೆರದಿ
ಒಳಹೊರಗಿನ ಬಾಳು ಬೆರೆತು
ಥಾಳ್ಳಿಸಲದೊಂದು ಶೋಭೆಯುಕ್ಕದು ಲೋಕಕೆ.
ನಿನ್ನೊಳಗಿನ ಬೆಳಕೆ ಬೇರೆ;
ಹೊರಬಾಳಿನ ಹೊಂಚೆ ಬೇರೆ-
ಯೆಂದೆಣಿಸುತಲೇಕರಸದ ದೈವಪಾಕಕೆ-

ಅಣಿಗೊಳಿಸಲು ನಿನ್ನ ದೇವ—
ನಿನ್ನಡಿಗಳ ಮುಂದಿಡಿಸಲು-
ಕನಸಿನಿಂದ್ರದೀವಿಗೆಯನ್ನಿಸಿದುಕೊಂಡನು.

ಮುಗಿಲಿನ ಮೇಲಿಂದಿಳಿಯುವ
ಸಪ್ತವರ್ಣಗಳ ಬೆಳಕನು
ದಾರಿ ಮಸುಕಬಹುದದೆಂದು ಕಸಿದುಕೊಂಡನು.

ದಾರಿದೀಪವಾಗಲೆಂದು
ಹಣತೆಯೊಂದ ಕೈಯ್ಯಲಿತ್ತು
ಅದರ ನಿಚ್ಚವೆಳಕಿನಲ್ಲಿ ಬಾಳ್ವುದೆಂದನು.
ಕುಡಿಯು ಸಣ್ಣದಾದರೇನು ?
ಕುಡಿವರಿಯುವ ಬೆಳಕದೊಂದೇ.
ನಿನ್ನ ನೇಹ ಹೆಚ್ಚಿದಂತೆ ನೀಳ್ವುದೆಂದನು.

ಅಂದಿನಿಂದ ಯೂಕೂಬನ
ನಿಚ್ಚಣಿಕೆಯ ಹೊಚ್ಚಡಿಯಲಿ
ನಿಂತು ನೀನು ಮೇಲೆ ಸರಿದ ಮುಗಿಲ ನೋಡುವೆ.
ಶಿಶುಭಕ್ತಿಯ ಮುಗ್ಧಮನೋ-
ಹರತೆಯ ವೇದಿಕೆಯ ತುದಿಗೆ
ನಿಂತು ಕಲ್ಪಕತೆಯ ಬಯಲೊಳಾಟವಾಡುವೆ.

ಸುತ್ತಲಿರುವ ಬಾಳ ಕಾಣು-
ತದರ ದುಃಖ-ಸುಖವನರಿತು
ಸ್ವಾನುಭವದ ಬಣ್ಣ ಬೆರಸಿ ಕನಸು ಕಟ್ಟುವೆ.
ಬಗೆಯ ಗಾಳಿಗುದುರೆಯಾಗಿ-
ಸುತ್ತ ಮನೋರಥವ ಹೂಡಿ,
ಕೆಳಗೆ ಬಂದು ಮೇಲೆ ಸರಿದ ಮುಗಿಲ ಮುಟ್ಟುವೆ.

ಮಣ್ಣಿನಲೂ ಮಣ್ಣಾಗದೆ
ಹುಡಿಯಲ್ಲೂ ಹೆಡೆಯೆತ್ತುತ
ನಾಗನಂತೆ ತಲೆಯ ತೂಗುತೂರ್ಧ್ವಮುಖಿಯಹೆ.

ಅನುವಿನಲೂ ಆಚಿನಲೂ
ದುಃಖದಲೂ ಹರುಷದಲ್ಲು
ಘನನಿರ್ಮಲಚಿತ್ತನಾಗಿ ಮೂರ್ಧಸುಖಿಯಿಹೆ.

ಕಲೆಯು ನೆಲೆಯು ಹಸ್ತಕವಿರೆ
ಮುಂದೆ ಬುದ್ಧಿನಯನ ತೆರೆದು
ದರ್ಶನದೈಸಿರಿಯೊಲಿಯುತ ತಾನೆಯೆ ಬರಬಹುದು.
ಇಡಿ ಜೀವಿತವಿರೆ ಪಾವನ
ತುಂಬಿದ ಸತ್ಯದ ಧಾವನ
ಶರಣನ ಶಾರಣ್ಯದ ಪರಮೈಕ್ಯವ ತರಬಹುದು.

---

## ೨. ಕವಿ-ಅನುಭಾವಿ

ನನ್ನ ನಿನ್ನ ದೃಷ್ಟಿಯೊಂದೆ.
ಆದರೆಮ್ಮದೃಷ್ಟ ಬೇರೆ-
ಯೆಂಬ ನಿನ್ನ ಮಾತನಿಂದು ಮತ್ತೆ ನೆನೆಸಿದೆ.
ಒಂದೆ ಕಡಲ ಕೂಡಲಾವು-
ಗಂಗೆ-ಯಮುನೆ-ಹರಿಯುತಿಹೆವು.
ಪಾತ್ರದೀ ಪ್ರವಾಹವೊಂದೆ ಬೇರೆಯೆನಿಸಿದೆ.

ಸಪ್ತ ಸಮುದ್ರಗಳ ದಾಟ
ಮಾನವೇತಿಹಾಸ ಕೋಟಿ-
ಗಳನು ಕಾಣಬಯಸಿ ನಾನು ಪಯಣ ಬೆಳೆಸಿದೆ.
ನಿನ್ನ ಹುಟ್ಟಿದೂರ ಗೆರೆಯ
ನೀನು ದಾಟಲಿಲ್ಲ; ನಿಂತ
ನಿಟ್ಟಿನಲ್ಲಿ ಮಹಾದ್ಭುತವ ಪಡೆಯಲೆಳಸಿದೆ.

ನಾನು ವೇಶದೇಶಗಳನು
ಶ್ವೇತ ಶ್ಯಾಮ ಪಿಂಡಗಳನು
ತಿರುಗಿ ರಕ್ತ ಸುಡಿಸಿ ತಂದಖಂಡ ಸ್ಫೂರ್ತಿಯು.
ನಿನ್ನ ಜನ್ಮ-ಭೂಮಿಯದುವೆ
ನಿನ್ನ ಕರ್ಮಭೂಮಿಯಿರಲು
ನಿಂತಿತಾಗುತಲ್ಲಿ ತಾನೆ ಸಗುಣ ಮೂರ್ತಿಯು.

ನನ್ನ ದೃಷ್ಟಿಯರಳಲೆಂದು
ಸೂರ್ಯನನ್ನು ಕುರಿತು ಬರೆದ
ಕವಿಚಂದ್ರನ ದ್ವೀಪದೆಡೆಗೆ ನಾನು ತೆರಳಿದೆ.

ನಿನ್ನ ಕಣ್ಣ ಕಣಿಯ ಕಾಣ-
ಲೆಂದು ನೀನು ಮೂಡದೆಸೆಗೆ,
ಅರವಿಂದವದರಳ್ದ ಸರಸಿಯೆಡೆಗೆ ಹೊರಳಿದೆ.

ನೀನು ಹಳ್ಳಿಯಾತನೆಂದು
ಪಟ್ಟಣಿಗರು, ನಾನು ನಗರ-
ವಾಸಿಯೆಂದು ಹಳ್ಳಿ ಜನರು ದೂರ ಸರಿವರು.
ಬರುವ ಸ್ವರ್ಣಯುಗದ ಸಮತೆ-
ಗಾಗಿ ಕಾಯುವಾತ್ಮವಿದರು,
ಮಧ್ಯಬಿಂದುವಿರಲು ನಾವು, ಸುತ್ತು ನೆರೆವರು.

ನಮ್ಮ ಕೆಳೆ ತ್ರಿಮೂರ್ತಿಯಂತೆ.
ಮಧ್ಯಮುಖವೆ ನಮ್ಮ ಪ್ರಾಣ.
ಎಡಬಲದಲಿ ನನ್ನ ನಿನ್ನ ವಾಣಿ ನುಡಿದವು.
ನನ್ನ ಕೈಯಲಿತ್ತು ಕೊಳಲು ;
ನಿನ್ನ ಕರದಿ ನಾಗಸ್ವರವು ;
ನಡುಗೈಗಳು ಶಂಖಚಕ್ರಗಳನು ಹಿಡಿದವು.

ಮುಕ್ತಿಯು ಬಳಿಸಾರುವ ದಿನ
ದೂರವೆಂದು ನನ್ನ ಧ್ಯಾಸ-
ವೊರೆಯೆ ಬೇರೆ ವಿದ್ಯೆಗಳನು ಪಡೆಯೆ ಹೋಗಿದೆ.
ವಿದ್ಯಮಾನವಾವುದಿಲ್ಲ
ಆತ್ಮವಿದ್ಯೆಯೊಂದನುಳಿದು
ಎಂದು ನೀನು ನಿಧಿಯ ಮನನದಲ್ಲಿ ತೊಡಗಿದೆ.

ನಾಡು, ನುಡಿ, ವಿಮರ್ಶೆ, ಕಾವ್ಯ,
ಕವಿಜೀವನಗಳನು ಕಟ್ಟಿ
ತಿಳಿವು ಬರುವದೆಂದು ನಾನು ಚಲ್ಲವರಿದಿಹೆ.

ತಿಳಿವು ಬಂದ ಮೇಲೆ ಮಾತ್ರ
ನಾಡು, ನುಡಿ, ವಿಮರ್ಶೆ, ಕಾವ್ಯ,
ಕವಿಜೀವನವೆಂದು ನೀನು ಮುಂದುವರಿದಿಹೆ.

ಕಲ್ಪಕತೆಯ ಮಳೆಬಿಲ್ಲನು
ಮಣಿಸಿ ಮುಂದೆ ರವಿ ಕಾಣುವ-
ನೆಂದು ನಾನು ಲೋಲಕದೊಲು ಬಣ್ಣದಾಟವಾಡುವೆ.
ಸೂರ್ಯನೆದುರು ಸೂರ್ಯಕಾನ್ತ-
ಶಿಲೆಯು ತೆರದಿ ನೀನು ನಿನ್ತ-
ದೊಂದಭೇದ್ಯ ದೃಷ್ಟಿಯಿಂದ ಧರಾತಲವ ನೋಡುವೆ.

ಇಳೆಯೊಳಿರುವನೇಕವೆಲ್ಲ
ಏಕಮೇವದಬುದವೆನ್ನು-
ತೇಕಚಿತ್ತನಾಗಿ ನೀನು ನಾಕವನ್ನೆ ನಂಬಿದೆ.
ನಾನನೇಕದಾಟದಲ್ಲಿ
ಜೀವವು ಸೆರೆಸಿಕ್ಕು ಜಿನುಗ-
ಲೇಕತಾನವನ್ನನೇಕದುಸಿರಿನಲ್ಲಿ ತುಂಬಿದೆ.

ಧ್ಯಾನ ಬೇಸರಿರಲು ಮೌನ-
ಕಿಂತ ಕಾವ್ಯವುಚಿತವೆಂದು
ನಾಗಸ್ವರವನೂದಿದಂತೆ ನೀನು ಕವನ ಕಟ್ಟಿದೆ.
ಧ್ಯಾನಕೆನಗೆ ವೇಳೆಯಿಲ್ಲ;
ಕಾವ್ಯರಚನೆ ತಾನೆ ಧ್ಯಾನ-
ವೆಂದು ಕೊಳಲನೂದಿ ನಾ ಸಮಾಧಿ ಮುಟ್ಟಿದೆ.

ಒಲವಿದೆಂದೆ ಚೆಲುವಿದೆಂದೈ,
ಮಾಮಾಯೆಯ ಗೆಲುವಿದೆಂದೆ;
ಸೌಂದರವನು ಸೂರೆಗೊಂಡು ನಾವು ಸಾರಲೆಸಗಿದೆ.

ಎಲ್ಲದಕೂ ಒಂದೆ ಹುಟ್ಟು;
ಎಲ್ಲದಕೂ ಒಂದೆ ಗುಟ್ಟು;
ಎಂದೆಲ್ಲವನೊಂದರಲ್ಲಿ ನೀನು ಹೊಸಗಿದೆ.

ಧರ್ಮವೆನಗೆ ಬೇಡವೆಂದೆ.
ಕಾವ್ಯಧರ್ಮವೊಂದೆ ಧರ್ಮ :
ಧರ್ಮಗಳನು ಕಟ್ಟಲವು ಅಧರ್ಮಕೆಳೆವವು.
ಧರ್ಮಕಿರುವ ಕಾವ್ಯಮಯತೆ-
ಯನು ತಿಳಿಯುವ ಭಾಗ್ಯ ನಿನಗೆ.
ನಿನ್ನೊಳಿಲ್ಲ ಧರ್ಮಮತಗಳಗಿತು ಮೊಳೆವವು.

ವಿಧಿವಿಲಾಸಿನಿಯು ತಾನೆಯೆ
ನಿಂತು ನಿತ್ಯ ಜೀಕುತಿರುವ
ತೂಗುಯ್ಯಾಲೆ ನನ್ನ ಬಾಳು; ಸಾಗುತಿರುವದು.
ಮುಗಿಲಿನಂಚಿಗೇರುತೊಮ್ಮೆ
ರಸಾತಳಕಿಳಿಯುತೊಮ್ಮೆ
ಅಂತು ಇಂತು ನೆಲದ ಮೇಲೆ ತೂಗುತಿರುವದು.

ನಾನೇರಿದ ಬಾಳ ಹಯವ-
ನಿತ್ತನೇಕನಂತ ಶಯನ
ನೆಂದನೇಕ ವೇಳೆ ನಾನು ಚಿಂತಿಗೊಂಡಿಹೆ.
ಅದಕೆ ಹೂಡಿದಶ್ವರಾಜ-
ನಿಲ್ಲ ನನ್ನ ಹವಣಿನಲ್ಲಿ.
ಬವಣೆಯಿದನು ತಪ್ಪಿಸೆಂದು ಬೇಡಿಕೊಂಡಿಹೆ.

ನೀ ಕಾಣದ ನಂದನಕದು
ಬಿಡುವದೆನ್ನ ನೆಳೆದೊಯ್ಯುತ;
ಮತ್ತದೊಮ್ಮೆ ನೀನು ಕಾಣದಂಥ ನರಕಕೆ

ಇಂತು ಮೇಲೆ ಕೆಳಗದೆನ್ನ
ಓಡಿಯಾಡಿಸುತ್ತ, ಒಳಗೆ
ಹೊಂಚು ಹಾಕುತಿರುವದೊಂದು ಕರ್ಮಪಾಶಕೆ.

ನಿನ್ನ ಬಾಳು ಸಮವಿಶಾಲ;
ಏರಿಳುವಿನ ಬವಣೆಯಿಲ್ಲ;
ಕರಿಕೆಯಿರದ ನೆಲದಿ ಹಸಿರು ಪಚ್ಚುರು ನಿಂತಿದೆ.
ತೆನೆವಡೆಯುತ ಹಾಲುದುಂಬ-
ಲೊಡೆಯು ಕೊಯ್ಯುವಾತ ಬರಲು
ಬೀಜಗಾಳಿನಿಂದ ನೆಲವ ತುಂಬುವಂತಿದೆ.

ನಿನಗೆ ಕಷ್ಟನಷ್ಟವಿಲ್ಲ-
ವೆಂದು ನಾನು ನುಡಿಯಲಿಲ್ಲ.
ನಟ್ಟು ಕಡಿದೆಯೆಂದದಿಂಥ ಬೆಳೆಯು ಬಂದಿತು.
ಅಗ್ನಿಪರೀಕ್ಷಣವು ನಿನಗೆ.
ನನಗೆ ವಾಯುಪರೀಕ್ಷಣವು.
ಈ ಪರೀಕ್ಷೆಯಿಳಿದರೊಂದೆ ಕೀರ್ತಿ ಸಂದಿತು.

ಹೆಚ್ಚು ನುಡಿಯಲೇಕೆ ಗೆಳೆಯ?
ನೀನು ಮಧುರ; ನಾನು ಚದುರ.
ನಿನ್ನ ಸವಿಯು ನನ್ನ ಜಾಣ ಮೀರಿ ಮೆರೆಯುತ
ನಿಂತ ಶಕ್ತಿಯುಪಾಸನೆಯ-
ಲೆಮ್ಮ ಕಾರ್ಯಗಳ ಸಲ್ಲಿಸಿ
ಕೂಡಿಕೊಳುವ, ಜೀವಗಳನು ಧಾರೆಯೆರೆಯುತ.

ನನ್ನ ನಿನ್ನ ದೃಷ್ಟಿಯೊಂದೆ.
ಆದರೆಮ್ಮ ದೃಷ್ಟ ಬೇರೆ.
ಯೆಂಬ ನಿನ್ನ ಮಾತನಿಂದು ಮತ್ತೆ ನೆನೆಸಿದೆ.

ಒಂದೆ ಕಡಲ ಕೂಡಲಾವು-
ಗಂಗೆ-ಯಮುನೆ ಹರಿಯುತಿಹೆವು.
ಪಾತ್ರದೀ ಪ್ರವಾಹವೊಂದೆ ಬೇರೆಯೆನಿಸಿದೆ.

## ೧. ದುಃಖ   

ಮಾನವ-ದಾನವರೆದೆಯಿಂದೇಳುವ,
ದೇವತೆ-ಗಂಧರ್ವರ ಮನವಾಳುವ,
ಯಕ್ಷ-ಕಿನ್ನರರ ಕನಸನೆ ಕೇಳುವ
ಮಹಾ ಶಕ್ತಿಯೊಂದೇ :—
ಶೋಕವು ; ಪರಿತಾಪವು : ಬೆಂದೊಡಲಿನ
ಒರಲಾಟವು; ಮನುಕುಲ ಬರಸಿಡಿಲಿನ
ಹೊಡೆತಕೆ ನೆಲಕುರುಳುತ ಕಡಲಿನ ಮೊರೆ-
ಯಂತೆ ಮೊರೆವುದೊಂದೇ.

ಮಾನವ ಜಾತಿಯ ಹುಟ್ಟಿಸಿದಾತ,
ಜಗದೋದ್ಧಾರನು, ಗ್ರಹಗಳ ತಾತ,
ಗೂಢವಾಗಿಸಿಹನೊಂದೇ ಮಾತ :—
ಭೂಮಿಯ ಪರಿತಾಪ.
ಈ ಪರಿತಾಪದ ತಳ-ಬುಡವೇನು ?
ಮಂತ್ರ-ತಂತ್ರವಿದಕಿಲ್ಲವೊ ಏನು ?
ಇದ ತಡೆಗಟ್ಟುವ ಮಾರ್ಗವದೇನು ?
ಯಾರದೇನು ಶಾಪ ?

ಹುಟ್ಟಿದೊಡನೆ ಆಕ್ರಂದಿಸಿ ನರನು
ಆಮರಣವು ನೋಪಿಲ್ಲದೆ ಇರನು ;
ಭವಾಗ್ನಿಯಲಿ ಬೇಯ್ವನು ನಶ್ವರನು :
ಏನಿದು ವಿಪರೀತ ?

ನಗೆಯೆಲ್ಲಾ ಬರಿ ಗಾಳಿಯ್ಗುಳ್ಳುದ್ದುದ;
ಸುಖವೆಲ್ಲಾ ಅಂತ್ಯದಿ ದುಃಖಪ್ರದ;
ಗೋಳೊಂದೇ ಬಾಳುವೆ ತಂದಿಹ ಹದ:
ಏಕಿದು ಉತ್ಪಾತ?

ಇದೆ ಹುಟ್ಟಿನ ಗುಟ್ಟಾಗಿರುವಲ್ಲಿ,—
ಹುಟ್ಟಿದೊಡನೆ ಸಾವಿರದೇಕಿಲ್ಲಿ?
ಯಥಾವಕಾಶದ ಕೊಲೆಯಿಹುದಿಲ್ಲಿ.
ಇದೇ ಏನು ನ್ಯಾಯ?
ಹಾಗಿದ್ದರೆ ದೇವಗೆ ಶರಣೆನ್ನು.
ಧರ್ಮವು ಮನಸ್ಸಿಗಂಟಿದ ತೊನ್ನು.
ಆತ್ಮನಾಶವೇ ಧರೆಯಲಿ ಚೆನ್ನು.
ಬಾಳ್ವುದು, ಅನ್ಯಾಯ.

ಎಳೆತನ ಗೆಳೆತನ ಬರಿ ಕನಸಾಗಿ,
ರಾಗವೆಲ್ಲ ಬರಿ ವಿರಾಗವಾಗಿ,
ಭೋಗವು ಭವರೋಗವೆ ಇರಲಾಗಿ
ಎತ್ತ ಹೊರಳಿದತ್ತ,—
ಯಾವ ಆಸೆಯಲಿ ಬೆಳೆವುದು ಬಾಳು?
ಇತಿಹಾಸವು ನರ್ತಿಸುತಿಹ ಹಾಳು
ಧರಣಿಯು. ಕಷ್ಟಪರಂಪರೆಯಾಳು
ನರನು. ತೆರಳ್ವುದೆತ್ತ?

ಈ ತಿರುಗಣೆ ಹೊರಗೊಂದೇ ಹಾದಿ:
ಎಂಪಿಡೋಕ್ಲೀಜ್ ಕಂಡಿಹ ಹಾದಿ;
ಅಂತರಪಿಶಾಚಿಯಲೆಯುವ ಹಾದಿ:—
ಅದುವೆ ಆತ್ಮಹತ್ಯೆ.

ಹಗ್ಗವು, ವಿಷಪಾನವು, ಬಂದೂಕು,
ಇರಲಿವು, ತಾಪತ್ರಯಕೆ ಪರಾಕು!
ಜೀವವ, ಹುಟ್ಟಿಸಿದವನೆಡೆ ನೂಕು!
ಅದುವೆ ಪಾರುಪತ್ಯ

ಹುಟ್ಟಿಸಿದೊಡೆಯಗೆ ಹುಟ್ಟಿಸಿದೋಸ್ಕರ.
ಬೆಳಕೇಕಿತ್ತನು ಮಾಯಾಭಾಸ್ಕರ?
ನೋಡಲೆಂದೊ ಜಗದೊಳಗಿನ ಮುಷ್ಕರ?
ನೋಡಿದೆ ಕಣ್ತುಂಬ.
ಅವಗಿದ್ದರೆ ಕಿವಿ,— ಗಜಗಿವಿಯಲ್ಲಿ
ಊದುವೆ ನನ್ನಂಕುಶಧ್ವನಿಯಲ್ಲಿ,
ಅನಾಗರಿಕತೆಯ ಕಗ್ಗವಿಯಲ್ಲಿ
ಕೇಳಿದರಾ ಹುಂಬ! :—

"ನೀನಿತ್ತುದ ನೀ ತಗೊ, ಮಹರಾಯ!
ನೊಂದಿತು ಜೀವವು. ಬೆಂದಿತು ಕಾಯ.
ರಿಟರ್ನ್‌ಡ್ ವಿಥ್ ಥ್ಯಾಂಕ್ಸ್! ಈ ತರಣೋಪಾಯ
ಕಂಡಿಹುದೇ ಮುಕ್ತಿ!
ಧರೆ ಸುಂದರವೆಂಬಾ ಫೂತ್ಕಾರ,
ನರಗಿತ್ತಿಹ ಆದರ-ಸತ್ಕಾರ,—
ಎಲ್ಲಕು ಸುದೀರ್ಘ ಸುನಮಸ್ಕಾರ!"
ಎಂಬುವದೇ ಯುಕ್ತಿ!

ಇದಕಿನ್ನೊಂದಿದೆ ಬುನಾದಿ ದಾರಿ.
ಅಲ್ಲಿಲ್ಲಿರುವರು ಇದ ಬಳಿ ಸಾರಿ
ತುಳಿವರು; ಭವಬಾಧೆಗಳನು ಮೀರಿ
ಜಗದಿ ರಾಜಿಸುವರು.

ಇವರಿಗೆ ತ್ಯಾಗದ ಸೆಕೆಯೇ ಇಲ್ಲ.
ಮತ್ತವರಿಗೆ ಏರದ ನಂಜಿಲ್ಲ.
ಆದರು ಲೋಕದ ದೊರೆಗಳನೆಲ್ಲಾ
ಇವರು ನಾಚಿಸುವರು.

ಮಾರ್ಕಸ್ ಅರೇಲಿಯಸ್, ಎಪಿಕ್ಯೂರಸರು
ಈ ಬಾಳಿನ ಹಿರಿತನಕೌರಸರು,
ಅನಾಸಕ್ತಿಯಲಿ ನಿರತಮಾನಸರು,
ಬಾಳಿದರೀ ಜಗದಿ.
ಇದ್ದರೂ ಸತ್ತವನಂತಿರಬೇಕು ;
ದುಃಖಕು ಸುಖಕೂ ಸಮವೆನಬೇಕು ;
ನಿರ್ಲಿಪ್ತತೆಯೊಡಮೂಡಿರಬೇಕು :
ಎಂದರಿವರು ಸೊಗದಿ.

ಇಂತಿದ್ದರು ಅಲ್ಲಮ ಪ್ರಭು, ಕನಕ ;
ಇಂತಿದ್ದನು ರಾಜರ್ಷಿಯು ಜನಕ :
ಹೊಂದಿದ, ಎಲ್ಲರು ಮಿಗಿಲೆನುವನಕ,
ಯೋಗಸಮಾಧಿಯನು.
ಕಾಲೊಂದನು ಉರಿವಗ್ನಿಯೊಳಿಟ್ಟು
ಹೆಣ್ಣಿನ ತೊಡೆಗಿನ್ನೊಂದನು ಕೊಟ್ಟು
ಅವ ಮುಗುಳ್ನಗೆ ನಗುತಿಹುದರ ಗುಟ್ಟು
ಮೀರಿದೆ ದ್ವಂದ್ವವನು.

ಪರಮಹಂಸಪದವನು ಪಡೆವಾತ,—
ಇಹನವ ಪೂತ, ಆತ್ಮವಿನೂತ ;
ಆದರೆ ಜನತೆಯ ಭಾಗ್ಯವಿಧಾತ
ತಾ ದಯೆ ತೋರುವನೆ ?

ಹುಟ್ಟಿದೊಡನೆ ಈ ವಿವೇಕ ಪ್ರಜ್ಞೆ
ನರನ ಸೊತ್ತು ಎಂದೀವನೆ ಅಜ್ಞ?
ಇಲ್ಲದೆ ತಾನಿತ್ತಿಹ ಪರ ಸಂಜ್ಞೆ
ಎಂದವ ಸಾರುವನೆ?

ಅಸಹಾಯತೆಯಾ ಎದೆ-ತಿದಿಯಲ್ಲಿ
ಹುಟ್ಟಿದ ಸಂಕಲ್ಪದ ಬದಿಯಲ್ಲಿ
ಬೆಳೆಯುವ ಪೌರುಷವನು ಬಿಡಿಯಲ್ಲಿ
ಅರ್ಪಿಸಿ ಬಾಳೋಣ.
ಇದಕೊಂದೇ ಇದು ಒಂದೇ ಹೊಳವು.
ಬೇರೆಯ ಹಾದಿಯ ಶೋಧನ ಮುಳುವು.
ಬೇರೆ ಸಾಂತ್ವನವು ಕರುಳಿನ ಕಳವು.
ಸಹಿಸುವ, ತಾಳೋಣ.

ನಿರಾಶೆಯಾ ನಿರ್ವಯಲದು ಬೇಡ.
ಕೊಳಕನ ಕಹಿ-ರುಚಿ ಕಷಾಯ ಬೇಡ.
ಮಾಯಾಮೋಹದಫೀಮೂ ಬೇಡ.
ಎಲ್ಲವ ತೊರೆಯಿಂದು.
ಆನಂದವನರಿಯದ ಚಾರ್ವಾಕ,—
ಅಹುದವನದು ಹದಗೆಟ್ಟಿಹ ಪಾಕ,
ಬೇಡ ಭಾವಿಕನು ಬೇಡುವ ನಾಕ,—
ಕಾಜಿನೊಳಗಿನಿಂದು!

ಅರಸು-ಬುದ್ಧಿಯದು ಬೆಳಕಾಗಿರಲು,
ಪಾವನ ಹೃದಯವು ತೊಳಗುತಲಿರಲು,
ಬಂದುದಕ್ಕೆ ಮನ ಪ್ರಸನ್ನವಿರಲು,
ಅಂತಃಕರಣಗಳು

ತೆರೆಯಲು, ಮತ್ತಿರಲುಡ್ಯಾಣದಲಿ
ಜೀವಹಕ್ಕಿ ದೈವಿಕ ಗಾನದಲಿ,
ಮತ್ತೆ ಮುಂದೆ ಬಹ ಸುಮ್ಮಾನದಲಿ
ಕಂಪಿಸೆ ಹರಣಗಳು,—

ಉನ್ಮೀಲನಿಸಲು ನವೀನ ನೇತ್ರ
ಹಿಗ್ಗುವದಂದಿಗೆ ಬಾಳಿನ ಗಾತ್ರ.
ಅಂದಿಗೆ ಋಷಿಗಳ ಪುತ್ರ-ಪ್ರಪೌತ್ರ
ನೀನಾಗುವಿಯಂತೆ !
ಅಂದಿನ ತನಕಾ ಕತ್ತಲೆಯಲ್ಲೂ
ನೋಯುದಿರಲಿ ನಿನ ಹೃದಯದ ಸೊಲ್ಲು.
ಮುಂದೆ ಮೂಡುತಿರೆ ಬೆಳಕೆಲ್ಲೆಲ್ಲೂ,—
ನೀ ಮಾಗುವಿಯಂತೆ !

---

## ೪. ನಿರ್ಲಿಪ್ತ

ಧಾಳ್ಳಿಸಿ ಬೆಳಕು-ಪರಿ-
ಮಳವ ಬೀರಿದ ದೀಪ
ತನಗೆ ತಾನೇ ಕುಂದಿ ನಂದಿತಿಂದು.
ತನ್ನ ಸುತ್ತುತ ಮುತ್ತಿ
ಬಂದ ಕತ್ತಲೆಯೊಡನೆ
ಹೋರಾಡಿ ಮರಣವನ್ನೈದಿತಿಂದು.

ಗಂಟೆ ಬಾರಿಸಲಿನ್ನು
ಗಣಗಣನೆ. ಎದೆತಮಟೆ
ಕೊನೆಯ ತಾಳವ ಹಿಡಿಯಲಿನ್ನು ಮುಂದೆ.
ಅಂಕು ಮುಗಿಯುವ ಮುನ್ನ
ತೆರೆಯು ಜಾರಿತು ಕೆಳಗೆ.
ಬಂದನೇ ಕಾಯ್ವನೆಂದೊರೆದ ತಂದೆ?

ಸುಖದೊಳೋಲಾಡಿರಲು
ಹರುಷದಲಿ ಹಿಗ್ಗಿದ್ದೆ.
ದುಃಖದಲಿ ಕುಗ್ಗಿ, ನರಳಿರುವೆನಿಂದು.
ಅದು, ಅಂತೆ. ಇದು, ಇಂತೆ.
ಕೈ ಬೀಸಿ ನಡೆದಿಹೆನು
ಸುಗ್ಗಿ-ಕುಳಿರುಗಳು ಬರಿ ಋತುಗಳೆಂದು.

ಬಾಳುವೆಯು ಬಯಲುಗನ-
ಸೆಂದು ಎಣಿಸಿರಲಿಲ್ಲ.
ಇಂದು ತಿಳಿದರು ಕೂಡ ಚಿಂತೆಯಿಲ್ಲ.

ಸಂತೆಯಲ್ಲಲೆದಾಡಿ
ಸುಖಿಸಿ ದುಃಖಿಸಿ ನರರು
ಮತ್ತೆ ಮರಳುವರಲ್ಲ? ಅಂತೆ ಎಲ್ಲ.

ನಿರ್ಲಿಪ್ತನಂಜನವ
ನನ್ನ ಕಣ್ಣಿಗೆ ತೊಡೆದೆ.
ಉತ್ಸಾಹ-ಪ್ರತಿಭೆಗಳು ಕುಸಿದವಿಲ್ಲಿ.
ಇರಲೇನು? ಹಣ್ಣು ಹಣ್—
ಆಗಿಸುವ ದುಃಖಗಳು
ಮಣ್ಣುಗೂಡುತ ತಾವೆ ಹುಸಿದವಿಲ್ಲಿ.

ಈ ಅಂಜನದ ಲೇಪ-
ವಿದ್ದ ನಯನದಿ ನೋಡೆ,
ಸೌಂದರ್ಯ,— ಹೊಳಪು ಕಳೆದಿರುವ ಮಣ್ಣಾಯ್ತು.
ವಿಶ್ವಚಕ್ರದ ನಿತ್ಯ
ಗತಿಯು ಮಂಗಳವಾಯ್ತು;
ಸಣ್ಣದಾಗಿರೆ ಸತ್ಯ, ಸಾವ್ ಸುಣ್ಣಗಾಯ್ತು.

ಮಾಯವಾಗಿದೆ ಮೋಹ.
ಪ್ರಖರವಾಗಿಹ ಬುದ್ಧಿ
ಹಿಡಿತದಲ್ಲಿಹುದು. ಮನ ಸುಮ್ಮನಿಹುದು.
ಜೀವವಿದು ಪಯಣ ಬೆಳ-
ಸಿರುವ ಮಳಲಿನರಣ್ಯ
ಹೂಗಳಿಲ್ಲದೆ ಕೂಡ ಕಮ್ಮಗಿಹುದು.

ಸಾಯ್ವೆನೆನುವಿಯಾ? ನಿನಗೆ
ಮುಳ್ಳೆ ಮುಳುವಾಗುವದು.
ಬಾಳ್ವೆನೆನೆ ಮರಣವೇ ಶರಣವಿಹುದು.

ದೈವಗತಿಯಿಂದ ಜ್ಞಾ-
ನಕೆ ಚ್ಯುತಿಯು ಬಂತೆನಲು
ಅದಕು ಹಿರಿ ತಿಳಿವಿನಾ ಸ್ಫುರಣವಿಹುದು.

ನಿರ್ಲಿಪ್ತನಂಜನದ
ಮಹಿಮೆಯರಿದರಿದೀಗ.
ಈವುದು ನಿಲಿಂಪರಾನಂದವನ್ನು ;
ಆತುಮನ ಸಿರಿನಾಡಿ-
ನಲ್ಲಿ ಸಂಚರಿಸೆ, ಬಹ
ಶಾಂತಿ-ಕಾಂತಿಯನಂದಚಿಂದವನ್ನು.

ಮಾನವರ ನಡುವೆ ನಿರ್-
ಲಿಪ್ತ ನಿಂತಿರುವನವ,—
ಶ್ರವಣಬೆಳ್ಗೊಳದಿ ಗೊಮ್ಮಟನ ತೆರದಿ.
ತನಗಿಂತ ಮುಂದಿನ್ನು
ಬೆಳಕಿಲ್ಲವೆನಲವನು
ತಮವಾಗಿ ಕವಿಯುವನು ಜಗವ ಭರದಿ.

## ೫. ಭಕ್ತ

ನೀನೊಂದು ಮನೆ ಕಟ್ಟಿ
ನನ್ನನಿರಿಸಿದೆ ಅಲ್ಲಿ.
ಗುಬ್ಬಿಮನೆಯಂತದನು ಕೆಡಿಸಿ ಬಿಟ್ಟು,
ಇನ್ನೊಂದು ಕಟ್ಟಿ ಕೊಡು
ನನ್ನ ವಾಸಕ್ಕೆಂದು
ಕಾಡಿ ಬೇಡುವೆ ನಿನ್ನ, ಹಟವ ತೊಟ್ಟು.

ಇದು ನಿನ್ನ ಲೀಲೆಯ್ಯ !
ಕಲಿತೆ ನಾ ನಿನ್ನಿಂದ
ಕಟ್ಟುವಳಿಸುವ ಬಗೆಯ, ಆಟಗಾರ !
ನಿನ್ನ ಲೀಲಾಜಾಲ-
ದಲ್ಲಿ ಸಿಕ್ಕಿದೆ ಕಾಲ;
ನಿನ್ನ ನಾಟದಿ ಜೀವ, ನಾಟಕಗಾರ !

ನೀರ ಮೇಲಿನ ಗುಳ್ಳೆ-
ಯಂತೆ ಹೊಳೆದಳಿಯುವವು
ಈರೇಳು ಭುವನಗಳು, ಒಂದನಂತ
ಕಾಲ-ಸ್ಥಾನ-ಬ್ರಹ್ಮ-
ದಲ್ಲಿ ನೀನಿಹೆ ಅಚಲ,
ನಿನ್ನ ಸ್ಫುರಣವೆ ನಮಗೆ ಆದಿ-ಅಂತ.

ನೀ ಸೃಷ್ಟಿಸಿದ ಪದ್ಮ
ಜೀವರಾಶಿಯಲೊಂದು
ಪರಮಾಣು ನಾನೆಂದು ಗಾಸಿಗೊಳಲು,—

ಪ್ರತಿಯೊಂದು ಜೀವ ಒಂ-
ದೊಂದು ಪದ್ಮವು, ಕಂದ!
ಎಂದು ರಮಿಸುವೆ ನನ್ನ, ಕಳೆಯಲಳಲು.

ನನ್ನ ಹೃತ್ಕಮಲವಿದು
ನಿನ್ನ ಕೋಮಲ ಸದನ,
ನಿನ್ನ ಪದಪದ್ಮವೇ ಮುಕ್ತಿವಾಸ.
ನೀ ತೋರ್ವ ಚೆಲುವಿನಾ
ಬಿಂದು, ಚಿಂತಾಮಣಿಯು,
ನೀನಭಯ ಕರ; ನಾನು ಚಂದ್ರಹಾಸ.

ಎಲರು-ಮಲರಿನ ಶಿಲ್ಪಿ,
ಭುವನ-ಕವನದ ಕವಿಯೆ!
ನನ್ನೊಳವತರಿಸಿರುವ ಮೂರ್ತಿಶಿಲ
ನಿನ್ನದಿದೆ, ನೀನದಕೆ
ಗುಡಿ ಕಟ್ಟಿ ಕಳಸವಿಡು.
ಕಾಯೆನ್ನ, ನೀ ಭೂಮ, ನಾನು ಅಲ್ಪ.

## ೧. ಜ್ಞಾನಿ

ತಾಳೆಗರಿಗಳನೋದಿ
ಕಣ್ಣೊಂದು ಕಳೆದಿಹುದು.
ಕಣ್ಣದಿನ್ನೊಂದು ಕುರುಡಾಗುತಿಹುದು.
ಇಂತಿರಲು ದಿನದೋದು
ಎಂದಿನೊಲು ನಡೆದೆ ಇದೆ.
ಇದ ನೋಡಿ ಕಾಲನಿಗು ಹುರುಡಾಗುತಿಹುದು.

ದುರ್ಬೀನಗಾಜೊಂದ-
ನುಳಿದ ಕಣ್ಣಿಗೆ ಹಚ್ಚಿ
ತಾಳೆಗರಿಗಳ ಗುಟ್ಟನೆಳೆಯುತಿರುವೆ
ಜನದೆದುರು. ಕಣ್ಣಿದ್ದು
ಕಾಣದಿಹ ಪಂಡಿತರ
ಕಣ್ಮನಗಳನು ಕುಕ್ಕಿ ತೊಳೆಯುತಿರುವೆ.

ಒಂದು ಕಾಳಗವೆಸಗಿ
ಮತ್ತೊಂದಕಣಿಗೊಂಡು
ರಕ್ತದಲಿ ಮುಳುಗೇಳುತಿಹುದು ಜಗವು ;
ಸಿಡಿಲುಮದ್ದನು ಕದ್ದು
ಜನರ ಮೇಲೆಸೆಯುತಿಹ
ಗಾಳಿದೋಣಿಗಳಿಂದ ತುಂಬಿಹುದು ನಭವು.

ಕಂಪಿಸುವ ನಿಷ್ಪಾಪಿ,
ಬೊಂಬು ಹಾಕುವ ಧೂರ್ತ,
ಗುಂಡಿಗಂಜದ ಗಂಡುಗಲಿ,— ಇವರ ತಂಡ

ನೋಡಿದೆಡೆ ನಯನಗಳ
ಅರ್ಘ್ಯಗಟ್ಟುತ ಬಂತು
ತಲ್ಲಣಿಸುತಿರೆ ಶೋಕಧ್ವನಿಗೆ ನವ ಖಂಡ.

ನೀನು ಕುಳಿತಲ್ಲಿಂದ
ಕದಲಿಲ್ಲ; ಬದಲಿಲ್ಲ,—
ನಿನ್ನ ನಿತ್ಯದ ಬಾಳು ನಿತ್ಯದಂತೆ;
ಓದುತಿಹೆ, ಕುರಿಯುತಿಹೆ
ಮೈಗರೆಯುವನೃತಗಳ
ನಡುವೆ ಸ್ಥಿರವಾಗಿರುವ ಸತ್ಯದಂತೆ.

ಓಂಕಾರದುತ್ಪತ್ತಿ,
'ಕನ್ನಾಡಿ'ನಿತಿಹಾಸ,
ಹೊಯ್ಸಳರ, ನಾಡವರ ಕುಲಗಳುಗಮ,
ಅಲ್ಲಮನ ಜನನದಿನ,
ಬಲ್ಲಣನ ಪುಣ್ಯತಿಥಿ:—
ಇದರರಿವೆ ನಿನ್ನ ಗುರಿ, ನಿನ್ನ ನಿಗಮ.

ಎಲ್ಲ ಭಾಷೆಗಳೆಲ್ಲ
ಕೋಶಗಳು ತುಂಬಿಹವು
ನಿನ್ನ ಕೋಣೆಯ ಜಂತಿ-ಭಿಂತಿಗಳನು.
ನುಡಿಗಳುಗಮವ ತೋರ್ವ
ಮಂತ್ರ ಮೂಡಿರೆ ನಿನ್ನ
ಚಿತ್ತಭಿತ್ತಿಯಲೊರೆದು ಪಙ್ಕ್ತಿಗಳನು.

ಸತ್ಯದಣುರೇಣುಗಳ
ಕಾಣಬೇಕೆನ್ನುತಿಹೆ
ಉಸುಬಿನಲಿ ಹೊಂಗಣವ ಹುಡುಕಿದಂತೆ;

ಬರಿ ಮಹಶಿಯನು ಬೆನ್ನು
ಹತ್ತಿ ಶೋಧಿಸುತಿರಲು
ಮುಗಿಲೋಳಿಯಲಿ ಮನವು ತೊಡಕಿದಂತೆ.

ಪರಮಾಣುವಿನ ಶೋಧ
ಬಾಳಿಗಿಹ ಪರಮಾರ್ಥ;
ನುಡಿಯೊಂದ ನಡೆಯೊಂದನೆತ್ತಿ ಹಿಡಿದು
ಇಂತಿದರ ಮೂಲ ಮತ್-
ತಿಂತಿದರ ಋತವೆನಲು
ಸರಸತಿಯು ನಲಿಯುವಳು ವೀಣೆ ಮಿಡಿದು.

ಯಾವ ಕುಲಕೂ ಸತ್ಯ ;
ಯಾವ ಕಾಲಕು ಸತ್ಯ-
ವೆಂದೊಂದು ಸಂಗತಿಯನೊಂದು ಪದವ
ನಿಲ್ಲಿಸುವ ಮಾನವಗೆ
ಚಿರಜೀವಿ ಪಟ್ಟವಿದೆ,
ಶೂನ್ಯದಾಲಯ ತೆರೆಯೆ ತನ್ನ ಕದವ.

ಸತ್ಯದ ವಿರಾಟತೆಯ
ಕಂಡು ತಣಿದವರೆಲ್ಲಿ?
ಎಲ್ಲ ಕಣ್ಣನು ಕುಕ್ಕಿತದರ ದ್ಯುತಿಯು.
ಕಂಡಿರುವನಂತವನು
ಕಾಣದೊಂದು ಅನಂತ
ಹೆಗಲೇರಿ ಕುಣಿಯುತಿದೆ, ಕಂಗೆಡಲು ಮತಿಯು.

ವಿಶ್ವಕ್ಕೆ ಸರ್ಪಗಾ-
ವಲವಿಡುವ ಹವ್ಯಾಸ
ವ್ಯಾಸನಿಗು ದುಃಸಾಧ್ಯವೆಂದು ಬಗೆದು

ಬರಿಯೊಂದು ಕಣವ ತಿಳಿ
ಜ್ಞಾನಕಂಕಣನಾಗಿ
ಪರಿಯ ಮೇಲಿರುವ ಪರಿಯನ್ನು ತೆಗೆದು.

ಕುರಿತಿರಲು ಕಣವಾಗ-
ಬಹುದು ಜ್ಯೋತಿರ್ಲಿಂಗ;
ಮಿಡಿಯ ತಳಿರೆದೆಯಲ್ಲಿ ಇಡಿಯು ಹೊಳೆದು;
ಸತ್ಯದ ಸ್ವಯಂಜ್ಯೋತಿ
ಬೆಳಗುತಿದೆಯೆನು ಬರಲು
ನಿರ್ನಾಮವಿರಬಹುದು ತಮವು ಕಳೆದು.

ಒಂದು ವರುಷಕೆ ತಿಳಿವು
ಮೂಡದಿರಲಿನ್ನೊಂದು;
ಒಂದು ಜನ್ಮವು ಕಳೆಯಲಿನ್ನೊಂದು ಜನ್ಮ.
ಜ್ಞಾನಯೋಗಕೆ ಕಳಸ-
ವಿಡಲಿಡದಿರಲಿ ಸಿದ್ಧಿ :
ಜ್ಞಾನಸಾಧನವಹುದು ನಮ್ಮ ಧರ್ಮ.

ಬರಿಯೊಂದು ಶಬ್ದಕಿಹ
ಪ್ರಾರಬ್ಧವನ್ನರಿಯ-
ಲದರ ತುದಿಮೊದಲುಗಳ ಕಂಡು ಹಿಡಿದು
ಸತ್ಯದುಜ್ವಲ ತೇಜ-
ದಿರವಿನರಿವುಂಟಾಗ-
ಬಹುದು ದಾರಿಯಲದರ ಕಿಡಿಯು ಹಿಡಿದು.

'ಇಂಚವೇರ'ವು ಜನಿಸಿ
ದ್ರಾವಿಡರ ಕೊರಲಲ್ಲಿ,
ಆರ್ಯರೊಡನಿದ್ದು ಕೇರಲದ ಕಡಲು

ಗ್ರೀಸ-ರೋಮದ ಕಡೆಗೆ
ಸಾಗಿಸಿರೆ ಮಾರ್ಪಟ್ಟು
ಮುಂದೆ ರೋಮಕ್ಕೆ ಹೂಣರು ದಾಳಿಯಿಡಲು,

ಅಲ್ಲಿಂದ ತೆರಳಿತ್ತು
ಜರ್ಮನಿಗೆ 'ಪಂಜರ'ವು,
ಆಂಗ್ಲರಾ ನಾಲಗೆಯ ತುದಿಗೆ ನೆಲಿಸಿ;
ಮರಳಿ ಭಾರತಕಿಂದು
ಬಂದು ನಿಂತಿಹುದೆಂದೆ
ಯುಗಯುಗಗಳಿತಿಹಾಸವನ್ನು ಕಲಿಸಿ.

೨

ಬಡತನವು ಬಂದು ಮನೆ-
ಯೊಳಗೆ ತಾಂಡವವಾಡಿ
ನಿನ್ನ ತನು-ಮನಗಳನು ನೋಯಿಸಿತ್ತು;
ನಿನ್ನ ಜ್ಞಾನೋಪಾಸ-
ನೆಯು ನಿತ್ಯಕಳೆಗೊಂಡು
ನಾಡ ಕಣ್ಮನಗಳನು ತೋಯಿಸಿತ್ತು.

ಅಕ್ಕಿ-ಜೋಳಗಳಿಲ್ಲ-
ವೆಂದು ಹೆಂಡತಿ ಕನಲಿ
ದುರದುರನೆ ನೋಡಿರಲು ನಿನ್ನ ಮೊಗವ—
ಶೂನ್ಯಮಂಟಪವಾವ
ತಾಣದಲ್ಲಿತ್ತೆಂಬು-
ವನು ಕಂಡೆನೆಂದು ನೀ ತಾಳ್ದೆ ಸೊಗವ.

ಮಗುವೊಂದು ವಿಷಮಜ್ವರ-
ದಿಂದೊರಲಿ ಮಲಗಿರಲು,
ತಾಳಿಕೋಟೆಯ ಯುದ್ಧವಾದ ತಡಿಗೆ

ಎಸಗಿತೆಂಬುದರ ನಿರ್-
ಧಾರಕ್ಕೆ ನೀ ನಡೆದೆ
ಬಿಸಿಲಿನಲಿ ಬೆಳುವಲದ ನಾಡ ಗಡಿಗೆ.

ಮನೆಯಲ್ಲಿ ಹೆಂಡತಿಯು
ಹಡೆದು ಹಾಸಿಗೆ ಹಿಡಿದು
ಹಾಲು ಕಾಣದ ಕೂಸು ನರಳುತಿರಲು
'ನಲ್' ಎಂಬ ನಲ್ನುಡಿಯ
ಮೂಲ ಹೊಳೆದಿತ್ತೆಂದು
ನೀನು ಕುಣಿದಿದ್ದೆ ಮನವರಳುತಿರಲು.

ನಿನಗಿಲ್ಲ ಮೆಚ್ಚಲಿಕೆ
ಕೆರ-ಮೊಚ್ಚೆಗಳ ಜೋಡು,
ಪುಲಿಕೇಶಿ ಎಂಥ ಪಾದತ್ರಾಣವ
ತುಳಿದನೆಂಬುದ ತಿಳಿಯ
ಬಯಸಿ ನೀ ಪರಿಕಿಸಿದೆ
ಬಾದಾಮಿ ಬಸದಿಗಳಲಿಗಿಹ ಮೇಣವ.

ವಿಜಯನಗರದ ವಿಭವ-
ಗಳಿಗೆ ಬಣ್ಣವನಿತ್ತೆ
ಹೊಸ ಕುರುಹುಗಳನು ನೀ ಸಂಶೋಧಿಸಿ;
ಮನೆಯಲಿರೆ ದುರ್ಭಿಕ್ಷ
ಸುಖವ ಕನಸಾಗಿಸುತ
ನೀನೊಲಿದ ಪತ್ನಿ-ಸುತರನು ಬಾಧಿಸಿ.

ಬಂದ ಸಂಕಟಗಳನು
ತರಿದೊಗೆವ ಸಾಮರ್ಥ್ಯ-
ವಿಲ್ಲದಿರೆ ನಿನ್ನ ವಿಧಿಲಿಖಿತವಲ್ಲಿ

ತಾಳುವೆದೆಗಾರಿಕೆಯ
ನೀಡೆಂದು ಮೊರೆಯಿಟ್ಟೆ
ದೇವನೆಡೆ, ಮನವಿರಲು ಸ್ತಿಮಿತದಲ್ಲಿ

ಮನೆಯ ತುಂಬಿರಲಿಂತು
ಮುಗಿಯಲಾರದ ದುಃಖ
ಮುಗಿಯದಾ ಬಿನ್ನಾಣ ಮನವ ತುಂಬಿ
ಬೆಳಗಿತ್ತು ಬಂದ ಕೊರ-
ತೆಗಳೆಲ್ಲವೊರೆಗಲ್ಲು
ಜ್ಞಾನವನ್ನೊರೆಯಲೆಂದಿರಲು ನಂಬಿ.

೩

ಮುಂದೊಮ್ಮೆ ನಿನ್ನನ್ನು
ಕನ್ನಾಡು ಮನ್ನಿಸುತ
ಲಕ್ಷ್ಮಿಯೊಲಿಯುತ ಕೀರ್ತಿ ಕೊನರುತಿರಲು
ನೀ ಬಾಳ್ದೆ ಕಡಲ ತಡಿ-
ಗೊಂದು ಕಿರುಮನೆ ಕಟ್ಟಿ
ಕಿವಿಯುಲದರರಸುದನಿ ಸತತವಿರಲು.

ಮಲೆನಾಡಿನೈಸಿರಿಗೆ
ನಿನ್ನ ಕಣ್ಮನವಿತ್ತು,
ಸತಿಸುತರಿಗೆಂದೆದೆಯ ನಲುಮೆಯಿತ್ತು
ನೀನು ಬಾಳಿದೆ ಜ್ಞಾನ-
ಕೆಂದು ಎಲ್ಲವನಿತ್ತು,
ಆತ್ಮವನು ಮುನ್ನೀರ ಮೊಳಗಿಗಿತ್ತು.

ಅಲ್ಲಮನ ಜನ್ಮದಿನ-
ವನ್ನು ಸಂಶೋಧಿಸಿರ-
ಲಲ್ಲಮನ ತಿಳಿದೆನೆಂದೆನುವುದೆಂತು?

ನಾಡವರ ಮೂಲವನು
ಕಂಡು ಹಿಡಿದಿಹುದು ನಿಜ.
ಬಾಳ ಮೂಲವಿದೆಂದು ಕೊನೆವುದೆಂತು?

ಇಂತು ಸತ್ಯದ ಕಣಜ-
ವನ್ನು ಕಟ್ಟಿದ ನೀನು
ನಿನ್ನ ಹೊಲವನೆ ಬಿತ್ತಿಬೆಳೆವುದೆಂದೆ
ಬಾಳ ಮೈದಾನದಲಿ
ಕಣವನಾರಿಸಿ ತಿಳಿಯು-
ತಾತ್ಮಕೃಷಿವಲನಾಗಿ ಹೊಳೆವುದೆಂದೆ.

ಕಲೆಹಾಕಿರುವ ಸತ್ಯ
ಮನವ ಬೆಳಗುವದು ದಿಟ
ನೆಲೆಯಿಲ್ಲದಾ ಸತ್ಯದೆಡೆಯ ಸಾರಿ;
ಅಣುರೇಣುಗಳು ನಮ್ಮ-
ನಣಿಗೊಳಿಸುವವು ನಿತ್ಯ
ಮಹತೋರ್ಮಹೀಯದಾ ದಾರಿ ತೋರಿ.

ವೇದೋಪನಿಷದುಗಳು
ಧರ್ಮಗ್ರಂಥಗಳೆಲ್ಲ
ತಮ್ಮ ಮುಡಿಪನು ನಿನಗೆ ಸಲ್ಲಿಸಿದವು.
ಎಲ್ಲ ತಾವರೆಗೊಳಗ-
ಳೆಲ್ಲ ಅರವಿಂದಗಳ-
ದೊಂದೆ ಸೂರ್ಯನನೆದುರು ನಿಲ್ಲಿಸಿದವು.

ಧ್ಯಾನದಲಿ ಮುಳುಗಿರಲು
ನಿನ್ನ ಕೈಯನು ನೋಡಿ
ಯಾರ ಕರವೆಂದು ನೀ ಬೆರಗುಗೊಂಡೆ;

ಊಟಕೇಳುವದೆಂದು
ಸತಿ ಬಂದು ಕೇಳಿರಲು
ಊಟ? ಊಟವೆ? ಎಂದು ದಿಗಿಲುಗೊಂಡೆ.

ನಾವು ಕವಿ, ವಿಜ್ಞಾನಿ,
ಶಿಲ್ಪಿ ಗಾಯಕರೆಂದು
ಮಕ್ಕಳುತ್ಸಾಹದಿಂದುಲಿದು ನಿಲಲು
ನಸುನಗುತ ನೀನೆಂದೆ :
ಕಾವ್ಯ, ಕಲೆ, ವಿಜ್ಞಾನ
ಕಾಣುತಿಹ ಗುರಿಯೊಂದೆ, ಒಂದೆ ಹೊಳಲು.

ಕವಿಯಿದ್ದ ಮಗನೊಬ್ಬ
ಮೂಡಣವ ನೋಡೆಂದ :
ಸೂಸಿ ಬರುತಿಹುದಲ್ಲಿ ಬೆಳ್ಳಿವೆಳಕು !
ನೀನೆಂದೆ : ಬೆಳಕಿಲ್ಲ-
ದಾ ತಾಣವೆಲ್ಲಿ ಮಗು ?
ಕಟ್ಟಿರುಳಿನಲ್ಲಿಯೂ ಬೆಳ್ಳಬೆಳಕು !

ಸಾಗರದ ಭರತಿದಂ-
ಡೆಗೆ ತಂದೊಗೆಯೆ ಕಾದ ಕಾದ
ಮಳಲಿನಲಿ ಬಾಯ್ಬಿಡಲದೊಂದು ಮೀನು
ತಿರುಗಿ ಮೀನವನೊಯ್ದು
ಕಡಲ ಕೂಡಿಸುತೆಂದೆ :
'ತಾಯ ಮಡಿಲನು ಮತ್ತೆ ಕಾಣು ನೀನು.'

ಮಗನೊಬ್ಬನನು ಕಚ್ಚಿ
ಕೊಂದ ನಾಗವು ನಿನ್ನ
ಮನೆಯ ತಲೆವಾಗಿಲವ ದಾಟದಾಗಿ

ನಿಲಲು, ಮನೆಜನರೆಲ್ಲ
ಶೋಕಿಸಲು ನೆರೆದವರ
ನಾಗಮಂತ್ರಗಳಾವು ನಾಟದಾಗಿ,

ನಾಗವನು ಕೊಲಲೆಂದು
ಜನರು ಕೈಯೆತ್ತಿರಲು
ತಡೆದವರ ನೀನೆಂದೆ: ಹೊಡೆವುದೇಕೆ?
ನಾಗವಹುದು ನಿಮಿತ್ತ;
ಘಟನೆ ದೇವನ ಚಿತ್ತ,
ಇದನರಿಯದವರಂತೆ ನಡೆಯಬೇಕೆ?

ಮುಂದೊಮ್ಮೆ ಹೆಂಡತಿಯ
ನೆಮ್ಮದಿಯ ವಿಧಿ ಕೆಡಿಸಿ
ಮರಣಶಯ್ಯೆಯಲವಳ ಮಲಗಿಸಿರಲು,
ಪುತ್ರ ಪೌತ್ರರು ಬಂದು
ಕಣ್ಣೀರು ಸುರಿಸುತಿರೆ,
ಉಳಿವಳೆಂಬಾಸೆಯನು ತೊಲಗಿಸಿರಲು,

ನೀನೆಂದೆ: ಜೀವಹ-
ಕ್ಕಿಯು ಹಾರುತಿರಲದನು
ಗೂಡನುಳಿಯುವದೆಂದು ಜರಿವುದುಂಟೆ?
ಜೀವವಿಲ್ಲಿಗೆ ತಾನು
ಗಳಿಗೆರಡು ಗಳಿಗೆಯನು
ಕಳೆಯಲೈತಂದುದನು ಮರೆವುದುಂಟೆ?

ನನ್ನೊಡನೆ ಬಾಳಿದಳು;
ನಲುಮೆಯನು ತಾಳಿದಳು
ನಿಮ್ಮಕ್ಷಿ ನಿಮ್ಮ ಹೆಜ್ಜಳಕೆ ದುಡಿದು.

ನೀವು ಸಂತಸಪಡಿರಿ:
ನಮ್ಮ ಮನೆ ಮುತ್ತೈದೆ-
ಯಿಹಳು ನಿತ್ಯಳು ನಾಳೆ, ಇಂದು ಮಡಿದು.

ಇಂತು ನಿನ್ನಯ ಮನವು
ಮುಗಿಲಂತೆ ಬೆಳಗಿತ್ತು
ವಿವಿಧ ಜ್ಯೋತಿಗಳಲ್ಲಿ ಹಾಯ್ದು ಹೋಗಿ;
ಸೂರ್ಯನಾರಾಯಣನು
ನೇಮದಿಂದೈತಂದು
ತನ್ನರುಣ ಮಂಡಲವನಲ್ಲಿ ತೂಗಿ.

ಎಲ್ಲ ಬೆಳಕಾಗಿತ್ತು:
ನಿನ್ನ ಕಣ್ಮನ ಬೆಳಕು;
ತಲೆಯ ಹಿರಿ ಗವಿ ಬೆಳಕು; ಬುದ್ಧಿ ಬೆಳಕು;
ನಿನ್ನ ಕರ್ಣವು ಬೆಳಕು;
ನಿನ್ನ ವರ್ಣವು ಬೆಳಕು;
ನಿನ್ನ ಹೃದಯದಿ ಬೆಳಕು ತುಂಬಿ ತುಳುಕು!

ಒಂದು ದಿನ ನೀ ನಡೆದೆ
ಕಡಲ ಸಿರಿ ಕಣ್ತುಂಬ
ಕಾಣ್ಬ ಮನವಿರೆ; ಕುಳಿತೆ ಹಿಗ್ಗುತಲ್ಲಿ;
ಮಳಲಿನೊಡನಾಡಿದ್ದೆ;
ಮುಗಿಲನ್ನೆ ಕೂಡಿದ್ದೆ;
ಮೇಲ್ವರಿವ ನೀರು ಬರೆ ನುಗ್ಗುತಲ್ಲಿ.

ತೆರೆಯ ಮೇಲ್ ತೆರೆ ಹಾಯ್ದು
ನೊರೆಯು ರಂಗಿಸೆ ನಿನ್ನ
ನಾಗಕುಂಡಲವಾಗಿ ಕಟಕವಾಗಿ

ಜಲತರಂಗಗಳೊಂದ-
ನೊಂದು ಭಂಗಿಸುತಿರಲು
ನೂರು ಲಹರಿಗಳಾಗಿ ತಾನವಾಗಿ,

ನೀಲಗಡಲಿನ ನಡುವೆ
ನೀಲಕಂಠನ ತೆರದಿ
ನೀ ನಿಂತೆ ಮಣಿಯದಲೆ ಮೂರ್ತಿಯಂತೆ;
ಮಾನವನ ಮನದಲೊಗೆ-
ವಂಥ ನಿಶ್ಚಲಜ್ಞಾನ-
ಕಿರುವ ಆಚಂದ್ರಾರ್ಕ ಕೀರ್ತಿಯಂತೆ.

ತೆರೆಯೊಂದು ಬಂದು ನಿನ್ನ-
ಡಿಗಳನು ತೋಯಿಸುತ
ಧನ್ಯನೆಂದೊರೆದು ಮೈಗರೆಯಿತಲ್ಲಿ;
ಇನ್ನೊಂದು ನಾಭಿಯೆಡೆ
ಬಂದಾಡಿ ಕಮಲನಾ-
ಭನ ಕಾಣ್ಬೆನೆಂದು ಕಣ್ದೆರೆಯಿತಲ್ಲಿ.

ಮತ್ತೊಂದು ಬಂದು ನಿನ್-
ನಡಿಮುಡಿಯ ಚುಂಬಿಸುತ
ಆತ್ಮದೇವನ ಗುಡಿಯ ಕಂಡಿತಲ್ಲಿ;
ಮಗುದೊಂದು ಹಿರಿದೆರೆಯು
ಬಂದು ಪರಮಾತ್ಮನಿವ-
ನೆಂದು ಹಿಗ್ಗುತ ತಬ್ಬಿಕೊಂಡಿತಲ್ಲಿ.

ದೂರ ನಿಂತಿಹ ಜನರು
ಭರತಿಯೆಂದೊದರಿದರು;
ಪ್ರಾಣಗಳನುಳಿಸಿಕೊಳರೆಂದು ಕೂಗಿದರು;

ಈಸಬಲ್ಲವರತ್ತ
ಮಾರುಗೆಯ್ಯಿಂದೀಸಿ
ನೀನು ನಿಂತೆಡೆಗೆ ಮುನ್ನುಗ್ಗಿ ಸಾಗಿದರು.

ಶೇಷಶಾಯಿಯು ತನ್ನ
ಕಡಲ್ಮುಗ್ದುರೆಗಳ ಕೇಸಿ
ನಿನ್ನ ಕರೆದೊಯ್ದಿಹುದನರಿಯರವರು.
ಕಡಲು ತನ್ನೊಡಲೊಳಿಹ
ಕೌಸ್ತುಭವು ಮರಳಿತೆಂ-
ದುಬ್ಬಿ ತಬ್ಬಿಹುದನ್ನು ಮರೆಯರವರು.

---

## ೨. ಆಳ್ವಾರ

ಬಾಳಿಕುಂದರ ನಾಡಿ-
ನಲ್ಲಿ ಬಾಳ ಪವಾಡ-
ವಾಗಿಸುತ ಆಳ್ವಾರ! ನೀನು ಮೆರೆದೆ!
ನಿನ್ನ ಜಪ-ತಪ-ಯೋಗ-
ಗಳ ಸಹಜ ಸಿದ್ಧಿಯನು
ಬಂದ ಬಳಗಕೆ ನಿತ್ಯ ಧಾರೆಯೆರೆದೆ.

ನೀನೀಗ ಹೆಸರಾದೆ ;
ಬರಿ ದಂತಕಥೆಯಾದೆ.
ನಿನ್ನ ನಾಮವ ಸ್ಮರಿಸಿ, ಹೆಗಲಲಿರಿಸಿ
ನಿನ್ನ ಪಲ್ಲಕ್ಕಿಯನ್ನು,
ಬಾಳುವರದೆನಿತೊ ಜನ ;
ನೀನಿರಲು ಮುಕ್ತಿಲಲನೆಯನು ವರಿಸಿ.

ನೀನೆಸಗಿದದ್ಭುತಗ-
ಳನ್ನು ನೆನೆವರು ಜನರು ;
ಕೆಲವರೊಡನುಡಿದಿರುವ ಗೀತಗಳನು;
ಬೇರೆ ಕೆಲವರು ನಿನ್ನ
ತತ್ವದೊಳತಿರುಳರಿತು
ಕಳೆಯುವರು ಬಾಳ ವಿಪರೀತಗಳನು.

ಗಾಳಿ ತುಂಬಿದ ಕೆಲವ-
ರೆರಗಿ ನಿನ್ನಡಿಗಳಲಿ
ಮರಳುವರು ಮನೆಗೆ ನಿಶ್ಚಿಂತರಾಗಿ ;

ಬಾಳ ಮರುಳ್ಗಣಿತಕ್ಕೆ
ಹೇಸಿಗೊಂಡಿಹ ಕೆಲರು—
ನಿನ್ನ ಕೃಪೆಯಿರೆ, ವೀತರಾಗರಾಗಿ.

ನಿಜ ಚಮತ್ಕಾರವಿದು:
ಮಾನವನು ತನ್ನರಿವ
ಕೊನರಿಸುತ ಮುಗಿಲ ತುದಿ ಮುಟ್ಟಬಹುದು;
ದೇಹಪಂಜರದಲ್ಲೆ
ಜೀವ ಮುಕ್ತಿಯ ಹೊಂದಿ
ಮಾನವೀಯತೆಯನ್ನು ಮೆಟ್ಟಬಹುದು.

ಕಬ್ಬಿಣವು ಪರಿಸಗ-
ಲ್ಲಿಗೆ ಸೋಂಕೆ ಹೊನ್ನೆನಲು
ಜನವು ಬಿಲ್ಲುಂಬೆರಗು; ಮರ್ತ್ಯದಾಳು
ದೇವನಿಗೆ ಶರಣಾಗ-
ಲಿಹನು ಮೃತ್ಯುಂಜಯನು:
ದಿವ್ಯ ಮಾನಸ್ತಂಭ,— ಅವನ ಬಾಳು.

ಮೈಮರೆತು ನೀ ಹಾಡೆ,—
ತೂಗಿತೀಶ್ವರಪಿಂಡ,
ಒಳಗುಡಿಯಲೆಲ್ಲ ಓಂಕಾರ ತುಂಬಿ.
ಅಚ್ಚರಿಯದೇನಿಲ್ಲಿ?
ನೀನೊರೆದು ನೋಡು, 'ಶಿವ-
ಯೋಗ ಬಲ್ಲವನೆ ಕವಿ' ಎಂದು ನಂಬಿ.

೨

ಹಟಯೋಗದ ಹಟವು ಬೇಡ,—
ದ್ರಾವಿಡ ಪ್ರಾಣಾಯಾಮವು.
ನಾದ-ಬಿಂದು-ಕಲೆಯ ಸಂತೆ ನಿನಗದೇತಕೆ?

ಪ್ರೇಮವೆ ಬಾಳುವೆಯ ಮೂಲ-
ವೆಂಬ ತತ್ವವರಿ; ತ್ರಿಶೂಲ-
ಧರನು ನೀನು, ಪೊರೆಯಿಡುವರೆ ಭೂತ-ಪ್ರೇತಕೆ?

ಜನ್ಮಾಂತರಗಳ ಪುಣ್ಯವು
ಫಲಿಸಲು, ದೈವವು ತೆರೆಯಲು,
ಶ್ರೀ ಸದ್ಗುರುವಿನ ಮೂರ್ತಿಯು ಕಣ್ಣೆದುರಿಗೆ ನಿಲಲು,—
ನೀನಹುದಂದೇ ಮುಕ್ತನು;
ಅವಿಭಕ್ತನು; ಅಭಿಷಿಕ್ತನು;
ಪಾವನವಿರುವದು ತನು-ಮನ, ಜೀವಾತ್ಮನು ಗೆಲಲು.

ಇಂತೊರೆಯುತ ಬಾಲಮುಕುಂ-
ದನು, ನಿನ್ನಯ ಸದ್ಗುರುವರ,—
ಗುರುವ ಕಂಡ ಸಂಗತಿಯನು ಸಾದ್ಯಂತವು ಹೇಳಿ
ನಿನ್ನಯ ಮೈ ರೋಮಾಂಚನ-
ವಿರೆ, ಪ್ರೇಮಸುಧಾಸಿಂಚನ-
ವನ್ನನುಭವಿಸುವದೆನ್ನುವಿ, ನಾವೆಲ್ಲರು ಬಾಳಿ.

೩

“ ಘಟಪ್ರಭೆಯ ತಡಿಗೆ ತಡೆದು
ದೂರ ದಾರಿಯನ್ನು ನಡೆದು
ಅಂಗೈಯ್ಯಲಿ ಜೀವ ಹಿಡಿದು ಬಾಳ ಹೋದನು
ಘೋರಾರಣ್ಯಗಳ ಸುತ್ತಿ;
ವಿರಹಜ್ವಾಲೆಯೊಂದು ಹೊತ್ತಿ
ಮೈ-ಮನಗಳ ದಹಿಸುತಿರಲು ತಾಳದಾದನು. ”

“ ಯೋಗದ ನಿಲುವೆಲ್ಲ ಕಂಡು
ಜಪ-ತಪದನುಭವವನುಂಡು
ದಾರಿ ತೋರುವಾತ ಕಾಣಲೆಂದು ನೋಂತನು.

ವೈಕುಂಠದ ದಾರಿಗಿಂತು
ಮುಳ್ಳು ಬಡಿವುದುಂಟೆ ? ಎಂದು
ದುಃಖಿಸುತ್ತ ನೆಲೆಗಾಣದೆ ಅವಿಶ್ರಾಂತನು."

"ಅವನ ಹಿರಿಯ ತಪಶ್ಚರಣ-
ವೆಲ್ಲ ತಪನವಾಗಿ ಹರಣ
ಜ್ವಲಿಸುತಿರಲು ಹಕ್ಕಿ ಹಾಡಿ ರೋದಿಸಿದ್ದವು.
ಬನದ ಮಧ್ಯೆ ದುಃಖವಾಂತು
ಅಹರ್ನಿಶಿಯಲಿಂತು ನಿಂತು
ಬಳಲುವೆದೆಯ ಶಾಂತಿಯನ್ನು ಶೋಧಿಸಿದ್ದವು."

"ಹೊಂಗಿಯು, ಕಣೆಹಂದಿ, ಚಿರ್ಚು
ಬೇಟೆಗೆಂದು ಬಂದು ಬೆರ್ಚು-
ತಿದ್ದವಿವನ ಬನದಿ ಕಂಡು, ಜಟಾಜೂಟವ.
ನೋಡುತೆನಿತು ವರುಷವಿಂತು
ತವಸಿ ತಪವ ಗೆಯ್ವನೆಂದು
ಚೋದ್ಯಬಟ್ಟು, ಬೇಟೆ ಬಿಟ್ಟು, ಮರೆತು ಕೂಟವ."

"ನುಡಿದವು ಮರಬಳ್ಳಿ ಮರುಗಿ
ತಾಳಲಾರದೆದೆಯು ಕರಗಿ
ಋತುಮಾನದಲೆಲ್ಲ ಕರೆದು ವರ್ಷಧಾರೆಯು
ತೋಯಿಸಿರಲು ತಮ್ಮನಿಲ್ಲಿ,—
ತವಸಿ ಕೇಳ್ದ ಕರುಣೆ ಎಲ್ಲಿ?
ಮಾನವೀಯ ದುಃಖಕಿಲ್ಲವೇನೊ ಮೇರೆಯು? "

"ಅಲ್ಲಿ ಹಾಯಲಿಲ್ಲ ಸೂರ್ಯ
ತನ್ನ ಕಿರಣ ವೈಡೂರ್ಯ-
ವನ್ನು ಕೋಟಿ ಸಲವು ಮೀರುವಂಥ ತೇಜವು

ಮುಂದೆ ಮೂಡಲಿರುವದೆನಲು ;
ಬೇಡ ತವಸಿಗಿರುವ ಕನಲು
ತನ್ನೊಳೆಂದು ಚಂದ್ರ ಮೂಡದಿರಲು,— ಸಾಜವು."

" ಘಟಪ್ರಭೆಯು ಹರಿವಳಲ್ಲಿ.
ಪೂರ್ಣ ಪುಣ್ಯ ಕೊನೆವುದಿಲ್ಲಿ.
ಪರ್ವಕಾಲಕೊಮ್ಮೆ ಗಂಗೆ ಗುಪ್ತಳಾಗುತ
ವಾರಣಾಸಿಯಲ್ಲಿ, ಬಂದು
ನಲಿವಳು ಬನದಡಿಗೆ ಇಂದು
ತವಸಿ ಕಂಡ ಕಣಿಯ ಸವಿದು ತೃಪ್ತಳಾಗುತ."

" ಭೂದೇವಿಯು ತನ್ನ ಹಿರಿಯ
ಸಿರಿಯ ಮರೆತು, ಕೊಳವ, ಗಿರಿಯ,
ಹಳ್ಳಿ-ಪಟ್ಟಣಗಳ ಮರೆತು, ನೆನೆಸಿ ಮುನಿಯನು,
ದಾರುಣ ಸ್ವರವನ್ನಾಲಿಸಿ,
ಕರೆಗೆ ಪ್ರಾಣಗಳ ಕೀಲಿಸಿ,
ಮುನಿಯ ದನಿಗೆ ಕೂಡಿಸಿಹಳು ತನ್ನ ದನಿಯನು."

" ವ್ಯಕ್ತಿಗತವಿದಲ್ಲ ಚರಿತ ;
ಹಿಂಗುತಿರುವದಿಳೆಯ ದುರಿತ
ಇಂಥ ಜನ್ಮ ಸಫಲವಾದ ವೇಳೆಗೊಮ್ಮೆಗೆ.
ಎಲ್ಲದರಲ್ಲೊಂದೆ ನೋಟ.
ಎಲ್ಲದರಲ್ಲೊಂದೆ ಆಟ.
ಎಲ್ಲ ದೆಸೆಗೆ ನೆಗೆವುದೊಂದೆ ಕಂಪು ಕಮ್ಮಗೆ."

" ಎಲ್ಲ ಚರಾಚರಗಳಲ್ಲಿ,
ಮನಗಳಲ್ಲಿ, ಬನಗಳಲ್ಲಿ
ಒಂದೆ ಬಯಕೆ ಮೊಳೆದು ಬೆಳೆದು ಮಾಗುವಂತಿದೆ.

ನಿರ್ಗುಣನಿಹ ಪರಮಾತ್ಮ
ತ್ರಿಗುಣದೊಳಗೆ ಸಿಲುಕಿದಾತ್ಮ,—
ಇವರ ಪ್ರೀತಿನಾಟಕವೇ ಸಾಗುವಂತಿದೆ. ”

“ ಇಂತು ಧರೆಯ ಪುಣ್ಯವೆಲ್ಲ
ಒಟ್ಟುಗೂಡಿತಿಲ್ಲಿ, ಎಲ್ಲ
ದೈವ ತೆರೆಯಿತೆಲ್ಲ ಪಾಪ ಹರಿದು ಹೋಯಿತು.
ಮತ್ತದೊಮ್ಮೆ ಬುವಿಯ ಕಣ್ಣು
ಕವಿದ ಕತ್ತಲೆಲ್ಲ ಮಣ್ಣು—
ಗೂಡುತುಷೆಯ ಬಣ್ಣವೇರಿ ಬೆಳಕದಾಯಿತು. ”

“ ಹಸಿವೆಯೆಂದು ಮರುಗುತಿದ್ದ ;
ಹಿಂಗಲೆಂದು ಕೊರಗುತಿದ್ದ ;
ಕಳೆಯುವಂಥ ಪುಣ್ಯಾತ್ಮರು ಹೊಳೆಯಲೆನ್ನುತಾರ್ತಿಸಿ
ಬಾಳನಂದು. ಕೈಯ್ಯಾನಿಸಿ
ಕಿವಿಗೆ, ಕೇಳಿದಳು ಧೇನಿಸಿ
ಭೂಮಿದೇವಿ,–ನೇಹದಣುಗನೊರಲುತಿರಲು ಪ್ರಾರ್ಥಿಸಿ. ”

“ ಆಗ ಮುಗಿಲ ಬಸಿರಿನಿಂದ
ಬಂತು ಗಾಳಿಯುಸಿರಿನಿಂದ
ವಾಣಿಯೊಂದು : ‘ ಬಂದೆ ! ಬಂದೆ ! ನಿನ್ನ ಹಸಿವ ನೀಗಿಸಿ ! ’
ಪ್ರದಕ್ಷಿಣವನೊಂದೆ ನಿಮಿಷ
ನಿಲಿಸುತಾಲಿಸಿದಳು ತೋಷ
ಮಿಗೆ, ಧರಿತ್ರಿ ದಿವ್ಯ-ಮಧುರ ವಾಣಿಯೊಳನುರಾಗಿಸಿ. ”

“ ಮುಂದೆ ಸುಳಿಯಿತೊಂದು ರೂಹು.
ಬಾಳ, ಬಳ್ಳಿವರಿಯೆ ಬಾಹು
ಬಿಗಿದಪ್ಪಿದ ಜೀವಪುರುಷನಾದ ಪುರುಷನ ;

ಅವಧೂತನ, ಚಿರನೂತನ
ಸಗುಣಾತ್ಮನ, ಹೃತ್‌ಚೇತನ-
ಗಳಿಗಿರಲಾ ಗಳಿಗೆಯಲ್ಲೆ ಮುಕ್ತಿದರುಶನ. "

" ಕಣ್ಣೊಳಾಗ ನೆರೆಯು ಮೀರೆ,—
ಆನಂದದ ಸತತ ಧಾರೆ—
ಜೀವನದಾ ಸಂಗಮೋತ್ಸುಕತೆಯು ಹಿಂಗಿರೆ
ಪಾವನನಲಿ, ' ಯಾರ ಹೆಸರ
ಹೇಳಿ ಮುಕ್ತಿಸಂಸಾರೋ-
ದಯದಿ ನಾನು ನಲಿವುದೆ'ಂಬ ನುಡಿಯ ಪಾಂಗಿರೆ "

" ಅವನಧರದಿ,—ಪುರುಷನೆಂದ :
' ರಾಮನ ಹೆಸರಿತ್ತು, ಕಂದ :
ನಾನಿಹೆ ರಾಮಾವಧೂತ, ದತ್ತಾತ್ರೇಯನ
ಆತ್ಮವಂಶದೌರಸರಲಿ
ನಾನೊಬ್ಬನು; ಭೂತಲದಲಿ
ಬಾಳು; ಜನವ ಹರಸು ಹೊಂದುವಂತೆ ಶ್ರೇಯನ.' "

" ಬಾಳನು ಬಾಲಾವಧೂತ-
ನಾದನಂದು, ಜಗವಿನೂತ,
ನದಿಯೆಲ್ಲವು, ಬನವೆಲ್ಲವು ಆನಂದಿತವಿರಲು ;
ಕಾರಣಪುರುಷನ ಹುಟ್ಟಿದು-
ಪೂರ್ಣತೆಯಾ ಒಳಗುಟ್ಟಿದು_
ಜನವಂದಿತ, ಮುನಿವಂದಿತ, ಸುರವಂದಿತವಿರಲು. "

೪

ಸಂಸಾರದಿ ಬೆಂದು ಬಳಲಿ
ಜೀವಕ್ಷುಧೆಯು ಹಿಂಗದಿರಲು
ಭವವ ಪರಾಭವಗೊಳಿಸಲು ತನುವ ನೀಡಿದೆ

ಬಾಲಮುಕುಂದನ ಪಾದಕೆ;
ನಿನ್ನನೆತ್ತಿ ಗುರುವು ನಲಿದು
ಗೌರವಿಸಲು ವರಗೀತಿಕೆಗಳನು ಹಾಡಿದೆ.

ಜೀವನ್ಮುಕ್ತಿಯನು ಹೊಂದಿ
ಆತ್ಮಲೀಲೆಯಲ್ಲಿ ನೀನು
ಬಾಳ್ವೆನೆನಲು,— ಶಾಪಾನುಗ್ರಹದ ಶಕ್ತಿಯ
ನಿನ್ನೊಳನುಗ್ರಹಿಸುತೆಂದ
ಗುರುವು: 'ನನ್ನ ಲೋಕಕಾರ್ಯ-
ವನ್ನು ಮುಂದುವರಿಸಿ ಜನಕೆ ಸುಧಾಸೂಕ್ತಿಯ.

ಧಾರೆಯೆರೆಯಲರ್ಹ ನೀನೆ,
ಎಲ್ಲರಲ್ಲಿ ನೀ ಬಲ್ಲಿದ;
ಇದಕೆ ಮುಡಿಪದಾಗಲಿನ್ನು ನಿನ್ನ ಜೀವನ.
ಶರಣೆಂದವರೆದೆಯುರಳಿಸು;
ಪಾಪದ ಹೊರೆಗಳನುರುಳಿಸು,
ಎಂದು ಮಲ್ಲಿಕಾರ್ಜುನನೆಡೆ ನಡೆದ ಪಾವನ.

ಅವನ ಗರುಡಿಯಲ್ಲಿ ಬೆಳೆದು
ಭವಗಾರುಡಿಯಾದೆ ನೀನು;
ನಿನ್ನ ಹಿರಿಯ ಮಂತ್ರಕೆಲ್ಲ ಲೋಕ ನಲಿಯಿತು.
ಗುರುವಿನೊಡನೆ ಮಸಣವಟ್ಟೆ-
ಯಲ್ಲಿ ನಿಂತು ಗಂಗೆಯಲ್ಲಿ
ಮಿಂದ ನಿನ್ನ ಯೋಗಬಲಕೆ ಭೂಮಿಯೊಲಿಯಿತು.

ಹಸಿ-ಬಿಸಿಯನೆ ಕೂಡಿ ಸುಡುವ
ಕುಂಭಕಾರನೆಂದೆ ನೀನು.
ನಿನ್ನನು ಬಳಿಸಾರಿದವರಿಗಾಪ್ತಬಂಧುವು,

ಪ್ರಾಣಸಖನು.  ಲೋಕದಲ್ಲಿ
ಹೊರಳುತಿರುವ ನಿರಾಶ್ರಿತರ
ಕುಲಕೋಟಿಗೆ ನೀನಾಗಿಹೆ ಕರುಣಾಸಿಂಧುವು.

ಸಾವಿರಾರು ಮನೆಗಳಲ್ಲಿ
ಇಂದು ಬೆಳಗುತಿರುವ ದೀಪ
ನೀನೆ ಹಚ್ಚಿದಂಥ ಹಣತೆ: ಎಂದು ನುಡಿವರು.
ನಿನ್ನ ವರ-ಪ್ರಸಾದದಿಂದ
ಕಂಗಳೆನಿತೊ ದಾರಿ ಕಂಡ-
ವೆಂದು ನಿನ್ನ ಬಟ್ಟೆಯಲ್ಲೆ ಬುಧರು ನಡೆವರು.

ನೀನು ಬಾಳ ಕರುಣ ಕಥೆಯ—
ತಾಪತ್ರಯವ, ಮರಣಭಯವ,
ಮೋಹ, ದಾಹ, ಬೇನೆ, ಬಳಲಿಕೆಗಳ— ಹಾಡಿದೆ
ಕಲ್ಲೆದೆಯೂ ಕರಗುವಂತೆ.
ತಾಂಡವಿಸುವ ವಿಧಿಯು ತನ್ನ
ಶಲ್ಯದಿಂದ ತಿವಿಯೆ, ನೋವನೆಲ್ಲ ತೋಡಿದೆ.

ಮತ್ತೆ ನೀನು ಮುಂದುವರಿದೆ
ಬಾಳ ಹಿರಿಮೆಯನ್ನು ಹಾಡಿ;
ಜೀವ ಕಂಡ ಸಗುಣ ಮೂರ್ತಿಯನ್ನು ಮೂಡಿಸಿ
ಸಹಜ ಕಾವ್ಯದಲ್ಲಿ. ಮಗುವಿ-
ನಂತೆಯೊಮ್ಮೆ ಕಂಡೆ ಗುರುವ;
ಒಮ್ಮೆ ತಾಯಿಯಂತೆ, ನಿನ್ನ ತೊಡೆಯೊಳಾಡಿಸಿ.

ಉದಯಾಚಲದಲ್ಲಿ ಕಂಡು
ಹೃದಯಾಂಬುಜದಲ್ಲಿರಿಸುತ
ಗುರುವ, ಮಾಯೆ ಇಲ್ಲಿ ಮುಗಿಯಿತೆಂದು ತೋರಿದೆ.

ಸ್ವಪ್ನದಲ್ಲು ಇಹದ ಚಿಂತೆ
ಹರಿಯಿತೆಂದೆ. ಸುರಿಯಿತೆಂದೆ
ಅಮೃತವೃಷ್ಟಿ. ಗುರುವೆ ದೇವರೆಂದು ಸಾರಿದೆ.

ನಂಬಲಾರದಿರುವ ಜಗಕೆ,
ಸಂಶಯದಲಿ ಹಿಂಸೆಗೊಂಡು
ಬುದ್ಧಿಯಲ್ಲಿ ಬಳಲಿ ಭ್ರಮಿಸುತಿರುವ ಲೋಕಕೆ,—
ಬುದ್ಧಿಗಲ್ಲ ಹೊರತು ಪ್ರೇಮ;
ಬುದ್ಧಿ-ದ್ರೋಹಿಯಲ್ಲ ಗುರುವು:
ಆತ್ಮವೃದ್ಧಿಯೊಂದೆ ಎಂದೆ ಮದ್ದು ದುಃಖಕೆ.

ದ್ವೈತಮಾರ್ಗವಿರಲಿ; ಅದ್-
ವೈತವಿರಲಿ; ಎಲ್ಲವಿರಲಿ:
ಸೃಷ್ಟಿಯಾದಿ ಸ್ಫೂರ್ತಿಯಾದ ಪ್ರೇಮದೊಡಲಲಿ
ಮೀಯುತಿರಲು, ಮಾರ್ಗವೆಲ್ಲ
ಮುಗಿದು, ತರಂಗಗಳ ತೆರದಿ
ತೆರೆನೊರೆಯಾಗಿರುವವೆಂದೆ ಬಾಳ ಕಡಲಲಿ.

ಇಂದು ನಿನ್ನ ಮಠವ ಕಟ್ಟಿ
ಭಕ್ತರೆಲ್ಲ ಬಂದು ಕೂಡಿ
ನಿನ್ನ ಪಾದುಕೆಗಳನಲ್ಲಿ ಪೂಜಿಸಿರುವರು.
ಔದುಂಬರದೆಡೆಗೆ ನಿನ್ನ
ದಿವ್ಯ ಸಮಾಧಿಯನು ನಿಲಿಸಿ
ಜನರ ತೃಪ್ತಿಯಾಗಲೆಂದು ಯೋಜಿಸಿರುವರು.

ದೇಹವಿಡುವ ಮುನ್ನ ನೀನು
ನಿನ್ನೊಳೊಸೆದ ಪ್ರಾಣದಲ್ಲಿ
ಮಠವ ಕಟ್ಟಿ ನೇಹಿಗನೊಲು ಬಾಳ್ವೆನೆಂದಿಹೆ.

ನಿನ್ನನಿಲ್ಲಿ ನೋಡದವರ,
ನಿನ್ನ ನೆನೆಸಿ ಬಾಳಿದವರ
ಬುದ್ಧಿ-ಮನಕೆ ಶಾಂತಿ-ಕಾಂತಿಗಳನು ತಂದಿಹೆ.

ಇಂತು ಲೋಕಪಾಲಕರಾ
ದಿವ್ಯ ಪಙ್ಕ್ತಿಯಲ್ಲಿ ನಿಂತು
ಕಾರಣದೇಹವನು ಧರಿಸಿ ಗೆಯ್ವೆ ಧಾರಣ.
ಚಾರಿತ್ರ್ಯದ ಮಹತಿಯನ್ನು
ನಿನ್ನ ಚರಿತದಲ್ಲಿ ಕಂಡೆ.
ನಾನು ನಿನ್ನ, ನಿನ್ನಂತಹ ಘನರ, ಚಾರಣ.

---

## ೩. ಮುಕ್ತಜೀವಿಗಳು 

ಮುಕ್ತಜೀವಿಗಳಿವರು
ಮುಗಿಲಿನಲಿ ಸಂಚರಿಸಿ
ಮೂಜಗವ ಸಲಹುವರು ಹಗಲು ರಾತ್ರಿ.
ಇವರ ಪ್ರೀತಿಯೆ, ಇವರ
ಕಾರುಣ್ಯವೇ ಬೆಳಕು;
ಆದರ ಸುಳಿವನೆ ಓಡಿವಳೀ ಧರಿತ್ರಿ.

ವಿಶ್ವದೆದೆಯಲ್ಲಿರುವ
ಜ್ಯೋತಿದೇಹಿಗಳಿವರು.
ಇವರು ಮಿಡಿಯಲು ತುಂಬಿ ಬಹವು ಸ್ವ[illegible]ಯು.
ಎಲ್ಲ ಕುಲ-ಲೋಕಗಳ
ಶಾಂತಿ-ಕಾಂತಿಗಳಿವರು.
ಇವರಾಜ್ಞೆಯಿಲ್ಲದಲುಗದು ವರುಣ-ವಾಯು.

ಎಲ್ಲ ತೇಜಸ್ವಿನವರು.
ಎಲ್ಲ ಓಜಸ್ವಿನವರು.
ಎಲ್ಲ ತಾಪಸರೆಲ್ಲ ಪುಣ್ಯವಿವರು.
ಸೃಷ್ಟಿ–ಸ್ಥಿತಿ–ಲಯಕಿರುವ
ಕಾಲಲಯವೇ ಇವರು:
ಶ್ರೇಷ್ಠಶ್ರೇಷ್ಠ ತ್ರೈಲೋಕ್ಯಗಣ್ಯರಿವರು.

ಇವರ ನುಡಿ ನುಡಿಯದಾ
ನಾಲಗೆಗೆ ಮಡಿಯೆಲ್ಲಿ?
ಇವರ ಕಾಣದ ಕಣ್ಗೆ ಮುಕ್ತಿಯೆಲ್ಲಿ?

ಇವರ ಕೆಗೆದಪ್ಪದಾ
ಕೋಳು ತುಂಬುವವೆಲ್ಲಿ ?
ಇವರೊಲಿಯುದಸುವಿಂಗೆ ಭುಕ್ತಿಯೆಲ್ಲಿ ?

ಬಾಳ ದೇಗುಲದಲ್ಲಿ
ಚಿರಸನಾತನರಿವರು;
ಬಾಳ್ಮೊದಲ ಬಲ್ಲವರು, ಬಹು ಪುರಾತನರು.
ಹೀಗಿದ್ದು ಯುಗಯುಗಕೆ
ಸಿಗುವ ಸನ್ನಿಧಿಯಿವರು :
ಸಂಕ್ರಾಂತಿಪುರುಷರ್ಕೈ, ನಿತ್ಯನೂತನರು.

ಗಾಳಿಯಲಿ ಬೀಸುವರು.
ಕಡಲುಗಳನೀಸುವರು.
ನಿಂತಗ್ನಿಯಲಿ ಕಾಸುವವರೆ ಇವರು.
ಮೋಕ್ಷಸುಖದಾಯಿನಿಗೈ
ಬಾಳ ನಾರಾಯಣಿಗೈ
ಶೇಷಶಯ್ಯೆಯ ಹಾಸುವವರೆ ಇವರು.

ಮಾನವನ ಹಿತಕಾಗಿ
ಜಗವ ಸಂಚರಿಸುವರು;
ಮಾಯೆಯನು ಬೀಸುವರು, ಸುರುಳಿಸುವರು;
ಅರಳಿರುವ ಕುಸುಮಗಳ
ಮರಳಿ ಮುಗಿಸುವರಿವರು;
ಅರಳಲಿಹ ಮೊಗ್ಗೆಗಳನರಳಿಸುವರು.

ನನ್ನ ಬಾಳಿರಲಿವರ
ಅರಿವಿಂದ, ಒಲವಿಂದ,
ಬಾಳಿಗರ್ಪಿಸುವ ಅರವಿಂದವಾಗಿ;

ನನ್ನ ಕಾವ್ಯವು ಗುಡಿಯು
ಭಕ್ತಮಧುಪರಿಗೆಂದು
ಸಂತರ್ಪಿಸಿರುವ ಮಕರಂದವಾಗಿ.

ಧಾರುಣಿಯಾದಿರಲಿವರ
ತಿಳಿವಿಂದ, ಹೊಳವಿಂದ,
ಗುಡಿಯು ದಾರಿಯ ಧರ್ಮಶಾಲೆಯಾಗಿ ;
ಸಾಳೆ ಮನುಕುಲವನ್ನೆ
ಮುನಿಕುಲವನಾಗಿಸುವ
ಅತಿಮಾನವರ ಕರ್ಮಶಾಲೆಯಾಗಿ.

---

ದೈವ ತನಗೆ ಸಲ್ಲಿಸಿರುವ
ರತ್ನಹಾರವನ್ನು ನಿನ್ನ
ಕೊರಳಲಿಟ್ಟು ನಲಿಯಲವಳ
ಮನ ಪ್ರಸನ್ನ. ಓಂ ನಮೋ !

ಮಣಿಹಾರದ ದ್ಯುತಿಯುನೊಂದೆ
ಗಳಿಗೆ ನೋಡಿ ಧನ್ಯನಿರಲು
ಹಿಗ್ಗು ಮೇರೆವರಿಯಲೊರೆಯಿ-
ತೆನ್ನ ಕೊರಲು. ಓಂ ನಮೋ!

ಇನ್ನು ನಿನ್ನ ಗಾನವೊಮ್ಮೆ
ಬರಲು ಕರ್ಣಗಳನು ತುಂಬಿ
ಕಾವ್ಯ ವಿಶ್ವವ್ಯಾಪಿ; ಜೀವ
ಗಗನಚುಂಬಿ. ಓಂ ನಮೋ !
ಓಂ ನಮೋ ! ಓಂ ನಮೋ !

# ಒಪ್ಪೋಲೆ

| | ತಪ್ಪು | ಪುಟ | ಸಾಲು | ಒಪ್ಪು |
|---|---|---|---|---|
| ೧ | ನಿನ್ನ ಅಮೃತ | ೩ | ೬ | ನಿನ್ನಮೃತ |
| ೨ | ಕವನ ಮಂದಿರ | ೪ | ೮ | ಕವನಮಂದಿರ |
| ೩ | ವರನ | ೧೨ | ೨೩ | ವರದ |
| ೪ | ಮುಂಗಾರಿಯ | ೨೯ | ೧೨ | ಮುಂಗಾರಿನ |
| ೫ | ಸಿಲುಕಿ | ೫೧ | ೨೪ | ಸಿಲುಕಿ |
| ೬ | ಧೇಯಮನದಲಿ | ೫೪ | ೧ | ಧ್ಯೇಯ ಮನದಲಿ |
| ೭ | ಮಾಗಿಬಹ | ೫೫ | ೧೦ | ಮಾಗಿ ಬಹ |
| ೮ | ಕಾಲ್‌ಬೀಳ್ವುದೆಂದು | ೭೬ | ೨೦ | ಕಾಲ್‌ದೀಳ್ವುದೆಂದು |
| ೯ | ಅರಳಿರುವ | ೭೮ | ೨೧ | ಅಳಿದಿರುವ |
| ೧೦ | ಪುಷ್ಪವಿಲ್ಲ | ೭೯ | ೧ | ಪುಣ್ಯವಿಲ್ಲ |
| ೧೧ | "ರುಗ್ಣಾಲಯ..." | ೮೦ | ಎರಡು ಸಾಲುಗಳನ್ನು ಒಂದೇ ಸಾಲಾಗಿ ಮುದ್ರಿಸಿದೆ | |
| ೧೨ | ನಿಮ್ಮ ಶಿಲ್ಪ | ೮೩ | ೧ | ಮನ್ನಣೆಯಿದು |
| ೧೩ | ದೆನಿತು ? | ೮೬ | ೨ | ದೆಂತು ? |
| ೧೪ | ಸಹಸಾಧವತು | ೯೦ | ೧೬ | ಸಹನಾವವತು |
| ೧೫ | ಯಿಂದ್ರ | ೯೯ | ೩ | ಇಂದ್ರ |
| ೧೬ | ಕಾಳಿಯಡಿನೆ | ೧೦೨ | ೨೧ | ಕಾಳಿಯಡಿಗೆ |
| ೧೭ | ನಿಮಗೆಂದ | ೧೦೮ | ೦೮ | ನಿಮಗೊಂದ |
| ೧೮ | ಅಲ್ಲದವೆ | ೧೦೮ | ೨೧ | ಅಲ್ಲವೆಣೆ |
| ೧೯ | ಮಾನವರನೊಂದೆ | ೧೧೧ | ೧೪ | ಮಾನವರದೊಂದೆ |
| ೨೦ | ಅದ್ರ | ೧೨೧ | ೭ | ಅದ್ರ್ಗ |
| ೨೧ | ನಿಸ್ಪ್ರಹ | ೧೨೨ | ೨೦ | ನಿಸ್ಪೃಹ |
| ೨೨ | ಸಿಧ್ಧ | ೧೪೦ | ೧೦ | ಸಿದ್ಧ |
| ೨೩ | ನೋಳಿಯಂಪಡಿ | ೧೪೯ | ೫ | ನೋಳಿಯಂದದಿ |
| ೨೪ | ಯಾದ | ೧೫೫ | ೨ | ಆದ |
| ೨೫ | [illegible] | ೧೫೬ | ೧೨ | ಕನ್ನಾಡಿನ |

| | | | | |
|---|---|---|---|---|
| ೩೬ | ಜನಗಣನೆಗೆ | ೧೬೪ | ೧೨ | ಜನ ಗಣನೆಗೆ |
| ೩೭ | ಮುನಿಸಿದ | ೧೬೯ | ೧೫ | ಮುನಿಸಿನ |
| ೩೮ | ನಿರಲಳಿಸಿದೆ | ೧೭೨ | ೧೫ | ನಿರಲಿಳಿಸಿದೆ |
| ೩೯ | ಮುಸುಕಿಬಹುದು | ೧೭೬ | ೫ | ಮುಸುಕಿ ಬಹುದು |
| ೪೦ | ಪ್ರಲಯಾನಿಲ | ೧೮೫ | ೨೦ | ಮಲಯಾನಿಲ |
| ೪೧ | ಸರಿಸಿ | ೧೯೬ | ೨ | ಕರೆದು |
| ೪೨ | ತುಟಿಯಲಗುತ | ೧೯೭ | ೧೦ | ತುಟಿಯಲುಗುತ |
| ೪೩ | ನೆಲ್ಲಗಳಹುತ | ೧೯೮ | ೬ | ನೆಲ್ಲ ಗಳಹುತ |
| ೪೪ | ಯಾನ | ೨೦೭ | ೯ | ಯೂನ |
| ೪೫ | ಇಳೆಯು, ನಿನ್ನ | ೨೦೮ | ೨೨ | ಇಳೆಯು, ನಿನ್ನ, |
| ೪೬ | ಮಳುಗಿ | ೨೧೦ | ೧೮ | ಮುಳುಗಿ |
| ೪೭ | ಪರಿಘದ | ೨೧೭ | ೧೨ | ಪರಿಧಿಯ |
| ೪೮ | ಪುಟ ೨೪೦ರ ಮೇಲೆ ಬರುವ ಶ್ಲೋಕಗಳ (೬ಸಾಲುಗಳುಳ್ಳ) ಮೊದಲಿಗೂ ಕೊನೆಗೂ ಅವತರಣಿಕೆಯ ಚಿಹ್ನೆಗಳನ್ನು ಸೇರಿಸಿಕೊಳ್ಳಬೇಕು. | | | |
| ೪೯ | ಕಾದ ಕಾದ | ೨೬೭ | ೧೭ | ಕಾದ |

